ಜಯಪ್ರಕಾಶನ— ೧.

# ಪುಸ್ತಕ ಪ್ರಪಂಚ

ಸ. ಸ. ಮಾಳವಾಡ



ಜಯ-ಪ್ರಕಾಶನ, ಧಾರವಾಡ

ಜಯಪ್ರಕಾಶನ— ೨.

# ಪುಸ್ತಕ ಪ್ರಪಂಚ

ಸ. ಸ. ಮಾಳವಾಡ



ಜಯ-ಪ್ರಕಾಶನ, ಧಾರವಾಡ

# ನಿವೇದನೆ

"ಕನ್ನಡ ತಾಯಿ" ಪ್ರಕಟವಾದನಂತರ 'ಪುಸ್ತಕ ಪ್ರಪಂಚ' ವನ್ನು ಜಯಪ್ರಕಾಶನದ ಎರಡನೆಯ ಕಿರಣವಾಗಿ ಕನ್ನಡಿಗರಿಗೆ ಸಲ್ಲಿಸುವ ಸಂತಸ ನಮಗೀಗ ಒದಗಿದೆ. ನಮ್ಮ ನಿರೀಕ್ಷಣೆಯನ್ನು ಮೀರಿ ಈ ಪ್ರಕಟನೆಯು ನಿರ್ದಿಷ್ಟ ಅವಧಿಗಿಂತ ಮೊದಲೇ ಸಿದ್ಧವಾಗಿ ವಾಚಕರ ಕೈಸೇರುತ್ತಿದೆ.

ತೀರ ಸಣ್ಣ ಪ್ರಮಾಣದಲ್ಲಿ ಉದಯಗೊಂಡಿರುವ 'ಜಯ-ಪ್ರಕಾಶನ' ಕ್ಕೆ ಅನುಭಾವಿಗಳ, ಪೂಜ್ಯರ, ಹಿರಿಯರ, ಆಪ್ತಸ್ನೇಹಿತರ ಸದಾಶಯಗಳು ದೊರೆತು ನಮ್ಮ ಯೋಜನೆಗೆ ಬಲವನ್ನು ತಂದಿವೆ. ಇಂತಹ ಬಲದಿಂದ ಉತ್ಸಾಹಗೊಂಡ "ಜಯ ಪ್ರಕಾಶನ" ಇನ್ನೂ ಮುಂದಿನ ಹೆಜ್ಜೆಯನ್ನಿಡುವಲ್ಲಿ ಅಣಿಯಾಗಿದೆ. 'ಜಯಪ್ರಕಾಶನ' ವು ವ್ಯಾಪಕವಾಗುವ ದಿಸೆಯಲ್ಲಿ ಕಾರ್ಯಪ್ರವರ್ತರಾಗಬೇಕೆಂದಿದ್ದೇವೆ. ಪುಸ್ತಕಪ್ರೇಮಿಗಳ ಸಹಕಾರ-ನೆರವುಗಳನ್ನು ಕೋರುತ್ತೇವೆ.

ಈ ಪುಸ್ತಕದ ಅಚ್ಚಿನ ಕೆಲಸವನ್ನು ಆಸ್ಥೆಯಿಂದ ವಹಿಸಿಕೊಂಡು ಅದನ್ನು ಅಚ್ಚುಕಟ್ಟಾಗಿ ಪೂರೈಸಿದ ಸಾಧನ ಮುದ್ರಣಾಲಯದ ಶ್ರೀ. ಎಸ್. ಜಿ. ಕುಲಕರ್ಣಿಯವರಿಗೆ ನಮ್ಮ ಕೃತಜ್ಞತೆಗಳು ಸಲ್ಲಬೇಕು. ಅದರಂತೆ ಮೊದಲಿನ ೧೬ ಪುಟಗಳನ್ನು ಮುದ್ರಿಸಿದ ಉಷಾ ಪ್ರೆಸ್ಸಿನವರಿಗೆ ನಮ್ಮ ನೆನಕೆಗಳು

ಧಾರವಾಡ
(ಕನ್ನಡಿಗರ ನಾಡಹಬ್ಬ)
೧೪-೧೦-೧೯೫೬

**ಶಾಂತಾದೇವಿ ಮಾಳವಾಡ**
'ಜಯ-ಪ್ರಕಾಶನ'

# ಲೇಖಕರ ಮಾತು

ಗ್ರಂಥವಿಮರ್ಶೆಗೆ ಸಂಬಂಧಪಟ್ಟ ಮನನೀಯ ವಿಚಾರಸರಣಿಯು ನ್ನೊಮ್ಮೆ ನಾನು ಸಂಗ್ರಹಿಸಿದ್ದೆ. ಆ ವಿಚಾರಸರಣಿ ಹೆಚ್ಚು ವ್ಯಾಪಕವಾದ ರೀತಿಯಲ್ಲಿ ಬಳಕೆಯಲ್ಲಿ ಬರುವುದು ಒಳ್ಳೆಯದೆಂದು ನನಗೆ ಅನಿಸಿತ್ತು. ಈಗ ಈ 'ಪುಸ್ತಕ ಪ್ರಪಂಚ'ದಲ್ಲಿ ಆ ಲೇಖನವನ್ನು ಅಳವಡಿಸಲಾಗಿದೆ. ಅಲ್ಲದೆ ನನ್ನ **೧೯೩೬-೧೯೪೬ರ** ಅವಧಿಯ ಕೆಲವು ಪುಸ್ತಕವಿಮರ್ಶೆ ಗಳನ್ನು ಇಲ್ಲಿಯ ಎರಡನೆಯ ವಿಭಾಗದಲ್ಲಿ ಸೇರಿಸಿದೆ. ಅಮೇರಿಕೆಯ ಇಂದಿನ ಪುಸ್ತಕ-ಪ್ರಪಂಚದ ವೈಶಿಷ್ಟ್ಯಗಳನ್ನು ಮನನ ಮಾಡಿಕೊಂಡ ಲೇಖಕ ರೊಬ್ಬರ ವಿಚಾರಸರಣಿಯನ್ನೊಳಗೊಂಡ ಒಂದು ಚಿಕ್ಕ ಲೇಖನವು ಈ ಕಿರುಹೊತ್ತಿಗೆಯ ಮೂರನೆಯ ಭಾಗವಾಗಿದೆ. ಇಲ್ಲಿಯ ವಿಷಯ ಅದನ್ನು ಹೊಂದಿಸಿಕೊಂಡ ವಿಧಾನ ಓದುಗರಿಗೆ ಉಪಯುಕ್ತವಾಗುವವೆಂದು ಆಶಿಸಲಾಗಿದೆ.

ಪುಸ್ತಕಕ್ಕೆ ಒಂದು ಸುಪ್ರಸಿದ್ಧ ಪತ್ರಿಕೆಯ ಹೆಸರನ್ನು ಬಳಸಿಕೊಂಡಿ ದ್ದೇನೆ ಆದುದರಿಂದ ಅವರ ಕ್ಷಮೆಯನ್ನು ಕೋರುತ್ತೇನೆ. ಇಲ್ಲಿಯ ಬರೆಹ ಗಳಿಗೆ ಹಿಂದೆ ತಮ್ಮ ಪತ್ರಿಕೆಗಳಲ್ಲಿ ಎಡೆಯನ್ನಿತ್ತುದಕ್ಕಾಗಿ 'ಜಯಕರ್ನಾಟಕ' 'ಪುಸ್ತಕ ಪ್ರಪಂಚ' 'ಪ್ರಬುದ್ಧ ಕರ್ನಾಟಕ' 'ಸಾಹಿತ್ಯಪರಿಷತ್ ಪತ್ರಿಕೆ' ಇವುಗಳಿಗೆ ಋಣಿಯಾಗಿದ್ದೇನೆ. ಕರ್ನಾಟಕದ ಈ ಸಲದ ನಾಡಹಬ್ಬ ಅರ್ಥಪೂರ್ಣವಾಗಿದೆ. ಕನ್ನಡಿಗರ ವಿಜಯದಶಮಿಯ ಈ ಶುಭದಿನದಂದು ಕನ್ನಡ ಪುಸ್ತಕಪ್ರೇಮಿಗಳಲ್ಲಿ ಈ ಕಿರುಹೊತ್ತಿಗೆಯನ್ನು ಆದರದಿಂದ ಅರ್ಪಿಸುತ್ತಿದ್ದೇನೆ.

ಕನ್ನಡಿಗರ ವಿಜಯದಶಮಿ
ಅಕ್ಟೋಬರ ೧೯೫೬

**ಸ. ಸ. ಮಾ.**

ಒ ಳ ಪಿ ಡಿ :

# ಪುಸ್ತಕ ವಿಮರ್ಶೆಯನ್ನು ಕುರಿತು

('ಡೆಂಟ್' ಸ್ಮಾರಕ ಉಪನ್ಯಾಸಗಳಿಂದ ಸಂಗ್ರಹಿಸಿದ ಫ್ರಾಂಕ್ ಸ್ವಿನ್‌ರಟನ್‌ರ ವಿಚಾರಸರಣಿ.)

ಪುಸ್ತಕಾವಲೋಕನವು ತಾತ್ಪೂರ್ತಿಕವಾಗಿ ಕೃತಿಯ ಬೆಲೆ ಕಟ್ಟುತ್ತಿದೆ. ವಿಮರ್ಶೆಯು ಶಕ್ತಿಗಳ ಯೋಗ್ಯತಾನಿರ್ಣಯ ಮಾಡುತ್ತಿದೆ. ಅಂತೆಯೇ ಅವೆರಡರಲ್ಲಿ ಸಾಕಷ್ಟು ವ್ಯತ್ಯಾಸವಿದೆ. ಕಾಲ್‌ರಿಜ್‌ನ ಒಂದು ಅಭಿಪ್ರಾಯ ಹೀಗಿದೆ: ಬರೆದುದನ್ನು ಕುರಿತು ಬೆಲೆ ಕಟ್ಟಲು ಬೇಕಾಗುವ ನೇಮಗಳನ್ನು ಹೇಳುವುದಕ್ಕಿಂತ ಹೇಗೆ ಬರೆಯಬೇಕೆಂಬ ಬಗೆಗೆ ತತ್ತ್ವಗಳನ್ನು ಪ್ರತಿಪಾದಿಸುವುದು ವಿಮರ್ಶೆಯ ಮುಖ್ಯ ಗುರಿಯಾಗಿದೆ. ವಿಮರ್ಶೆ ಕೃತಿಕಾರನ ಮನಸ್ಸನ್ನು ಅರಿತುಕೊಳ್ಳುವ ಪ್ರಯತ್ನ. ವಿಮರ್ಶಕ ತತ್ತ್ವಜ್ಞಾನಿ, ಅವಲೋಕನಕಾರ ಕೈಯಲ್ಲಿ ತಕ್ಕಡಿ ಹಿಡಿಯುವವ.

ಅವಲೋಕನಕಾರನು ಕೆಲವೊಂದು ಸಿದ್ಧ ತತ್ತ್ವಗಳಿಗನುಸರಿಸಿ ತನ್ನ ಅಭಿಪ್ರಾಯಗಳನ್ನು ಸಮರ್ಥಿಸುತ್ತಾನೆ. ಅಕ್ಷರವಿದರ (Men of letters) ಅಭಿರುಚಿಯನ್ನು ಕುರಿತು ಹೀಗೆ ಮಾರ್ಗದರ್ಶನ ಮಾಡಬೆಳಸುವುದು ಒಂದು

ಬಗೆಯಿಂದ ಹೆಮ್ಮೆಯೆನಿಸಬಹುದು. ನಿಯಮಗಳು ಗುರಿಯ ಸಾಧನಗಳೇ ಹೊರತು ಅವೇ ಗುರಿಯಲ್ಲ. ಕಾರಣ ನಿಯಮಗಳನ್ನು ಹೇಳುವಾಗ ಗುರಿಯೇನೆಂಬುದನ್ನು ಸ್ಪಷ್ಟವಾಗಿ ಅರಿತುಕೊಂಡಿರಬೇಕು. ಕೃತಿಕಾರನ ಮನಸ್ಸನ್ನೂ ಅರಿತುಕೊಳ್ಳಬೇಕಾಗುತ್ತಿದೆ. ಅವನ ಗುರಿಯನ್ನು ತಿಳಿದುಕೊಂಡು ತತ್ಕಾಲಕ್ಕೆ ಅದನ್ನು ಒಪ್ಪಲೂ ಬೇಕು. ಆಮೇಲೆ ಮಾತ್ರ ಯೋಗ್ಯತಾ ನಿರ್ಣಯದ ಪ್ರಶ್ನೆ ಬರುತ್ತಿದೆ.

ಹೊರಗಿನ ನಿಯಮಗಳನ್ನನುಸರಿಸಿಯೇ ಕವಿತೆ ರಚಿತವಾಗುವುದಾದರೆ ಅದು ಕವಿತೆಯಾಗಿ ಉಳಿಯಲಿಕ್ಕಿಲ್ಲ ; ಯಾಂತ್ರಿಕ ರಚನೆಯಾದೀತು. ಕಾರಣ ವಿಮರ್ಶೆಯ ತತ್ತ್ವಗಳು ಸ್ಥಿರವಾಗಿರಬಾರದು. ಅವನ್ನು ಹಿಗ್ಗಿಸಲೂ ಬರುವಂತಿರಬೇಕು.

ವಿಮರ್ಶೆಯ ತತ್ತ್ವಗಳನ್ನು ಕುರಿತು ಮೆಥ್ಯು ಆರ್ನಾಲ್ಡ್ 'ಸಮ್ಮೆಲ್ಲರಲ್ಲಿಯೂ ಇರುವ ತತ್ತ್ವಗಳು; ಸಂಬಂಧಗಳು' ಎಂದಿದ್ದಾನೆ. ವಿಮರ್ಶೆಯೆಂದರೆ 'ಜಗತ್ತಿನಲ್ಲಿ ಶ್ರೇಷ್ಠವಾದುದೆಂದು ತಿಳಿದುದನ್ನು, ಆಲೋಚಿಸಿದುದನ್ನು ಅರಿತುಕೊಳ್ಳುವ, ಬೆಳಸುವ ನಿಷ್ಪಕ್ಷಪಾತ ದೃಷ್ಟಿಯ ಪ್ರಯತ್ನ' ಎಂದು ಆತನು ಹೇಳಿದ್ದಾನೆ.

ತನ್ನ ಅಭಿಪ್ರಾಯವೇ ಶ್ರೇಷ್ಠವೆಂದು ಹೆಮ್ಮೆಯ ಸ್ವಭಾವದವನು ತಿಳಿದುಕೊಳ್ಳುತ್ತಾನೆ. ಆದರೆ ಒಳ್ಳೆಯದನ್ನು ಕಂಡು ಒಲಿಯುವ ಸ್ವಭಾವ ವಿಮರ್ಶಕನಿಗೆ ಇರಬೇಕಾಗುತ್ತಿದೆ.

ವಿಮರ್ಶಾ ತತ್ತ್ವಗಳಾವುವು ? ನಿಜವಾಗಿ ಅವು ಇಲ್ಲವೆಂದೇ ನಾನು ತಿಳಿಯುತ್ತೇನೆ. ಹಾಗೆ ಇವೆಯೆಂದು ತಿಳಿಯುವುದರಲ್ಲಿ ಭಿನ್ನಾಭಿಪ್ರಾಯವೇನೂ ಕಡಮೆಯಿಲ್ಲ. ಪಾತರಗಿತ್ತಿಯ ಪಕ್ಕವನ್ನು ಕತ್ತರಿಸಿ ಅಭ್ಯಾಸಮಾಡತೊಡಗುವುದು ಸಾಹಿತ್ಯದ ಕೆಲಸವಲ್ಲ. ಇಲ್ಲವೆ, ಪರೀಕ್ಷೆಗಳಲ್ಲಿ ಮಾಡುವಂತೆ ಅಂಕಗಳನ್ನು ಕೊಟ್ಟು ಬೆಲೆ ನಿರ್ಣಯಿಸುವ ಪದ್ಧತಿಯಿಂದ ಶ್ರೇಷ್ಠ ಕಲೆಯ ತಿರುಳನ್ನು ಅರಿತಂತೆಯೂ ಆಗುವುದಿಲ್ಲ. ಕಲೆಯು ಸಜೀವವಾದುದು. ಕಾಲ ಅಭಿರುಚಿಗಳಿಗನುಸರಿಸಿ ಪರಿಣಾಮದಲ್ಲಿ ವ್ಯತ್ಯಾಸವೂ ತಲೆದೋರುವುದು.

ವಿಮರ್ಶಕನಲ್ಲಿರಬೇಕಾದ ಶ್ರೇಷ್ಠ ಗುಣಗಳಿವು :

(೧) ಒಳ್ಳೆಯ ಅಭಿರುಚಿ.

(೨) ಸಹಾನುಭೂತಿ; ಪರೇಂಗಿತಜ್ಞಾನ.

(೩) ಪಾಂಡಿತ್ಯ.

(೪) ವಿವೇಕ.

(೫) ತನ್ನ ಅಭಿಪ್ರಾಯ ನಿರೂಪಿಸುವ ಕೊನೆಯ ಕ್ಷಣದ ವರೆಗೂ ಹೊಸತನ್ನು ಕಲಿತುಕೊಳ್ಳಬೇಕೆಂಬ ಲವಲವಿಕೆ.

ವಿಮರ್ಶೆಗೆ ಕೇವಲ ಪುಸ್ತಕ ಪಾಂಡಿತ್ಯವೊಂದೇ ಸಾಲದು. ಪುಸ್ತಕ ಪಾಂಡಿತ್ಯದಿಂದ ಮಾತ್ರ ಪ್ರೇರಿತವಾದ ವಿಮರ್ಶೆ ವಿಮರ್ಶಕನ ಅಭಿಪ್ರಾಯ ಮಾತ್ರ ಆಗಬಲ್ಲದು. ಇಂತಹ ಅಭಿಪ್ರಾಯ ನಿರೂಪಣೆಗೆ ಇತರ ಅನೇಕ ಸಂಗತಿಗಳೂ ಕಾರಣವಾಗಿರಬಹುದು. ತನ್ನ ಸ್ವಂತದ 'ಬೇಕು-ಬೇಡ'ಗಳ ಪ್ರಭಾವ, ಸಾಮಾಜಿಕ ಆವರಣ, ರಾಜಕೀಯ ಸಿದ್ಧಾಂತ, ಸಹವಾಸಿಗಳ ಮನೋವೃತ್ತಿಯ ಪರಿಣಾಮ—ಇಂತಹ ಸಂಗತಿಗಳೆಲ್ಲ ಒಬ್ಬನ ಅಭಿಪ್ರಾಯ ವನ್ನು ರೂಪಿಸಬಹುದು. ಒಮ್ಮೊಮ್ಮೆ ಇಂತಹ ವಿಮರ್ಶಕ ಹೆಮ್ಮೆಗೂ ಬಲಿ ಬೀಳುತ್ತಾನೆ. ಅಲ್ಲದೆ ಇತರ ಲೇಖಕರ ಬಗೆಗೆ ಬುದ್ಧಿಪೂರ್ವಕವಾದ ಅನಾದರ, ಸಹಾನುಭೂತಿಯ ಅಭಾವ ಇವುಗಳಿಂದ ಆತನ ಅಭಿಪ್ರಾಯವು ರೂಪು ಗೊಂಡಿರಬಹುದು. ತನ್ನದೊಂದು ಕ್ಷಣಿಕ ಲಹರಿಯನ್ನೇ ಅವನು ಸಾರ್ವ ಕಾಲಿಕ ಸಿದ್ಧಾಂತವೆಂದು ಊಹಿಸಬಹುದು. ಒಮ್ಮೆ ಅಭಿಪ್ರಾಯ ಮೂಡಿದ ಮೇಲೆ ಅದನ್ನು ಸಮರ್ಥಿಸಲು ತಾತ್ತ್ವಿಕ ವಿವೇಚನೆಯನ್ನು ಹರಿಯಿಸಲು ಪ್ರಯತ್ನಿಸಬಹುದು. ಆದರೆ ನಿರ್ಣಯಕ್ಕೂ ತಾತ್ತ್ವಿಕ ವಿವೇಚನೆಗೂ ಮೇಳ ಬೀಳದೆ ಹೋಗಬಹುದು. ಏಕೆಂದರೆ ನಿರ್ಣಯವು ಪೂರ್ವಗ್ರಹ ದೂಷಿತ ವಾಗಿರಬಲ್ಲದು. ಇಂತಹ ಅಭಿಪ್ರಾಯನಿರೂಪಣೆಯು ಶ್ರೇಷ್ಠ ಕೃತಿಯನ್ನು ಅಲ್ಲಗಳೆಯುವ ಹಾಗೂ ದೋಷಪೂರ್ಣ ಕೃತಿಗೆ ಸಲ್ಲದ ಮನ್ನಣೆ ಕೊಡುವ ಸಾಹಸಕ್ಕೂ ಕಾರಣವಾಗುತ್ತಿದೆ. ವಿಮರ್ಶಾ ತತ್ತ್ವದ ಬೆಂಬಲದಿಂದ ಎಂತಹ ಕೃತಿಯನ್ನೂ ಮೆಚ್ಚಬಹುದು; ಅಲ್ಲಗಳೆಯಬಹುದು. 'ವಾರ್ ಅಂಡ್ ಪೀಸ್' ದಂತಹ ಸುಪ್ರಸಿದ್ಧ ಕೃತಿಯ ಉದಾಹರಣೆಯಿಂದಲೂ ಈ ಮಾತನ್ನು ಸಿದ್ಧ

ಗೊಳಿಸಲು ಬರುತ್ತಿದೆ. 'ವಿಮರ್ಶಾ ತತ್ತ್ವಗಳಲ್ಲಿ ಅಂತಿಮವಾದುದನ್ನು ಹೇಳಲು ಬರುವುದಿಲ್ಲ. ಕಲೆಯಲ್ಲಿ ವಿವಿಧ ಮೆಟ್ಟಿಲುಗಳೂ, ಸೂಕ್ಷ್ಮ ಪದರುಗಳೂ ಇವೆ. ಕೆಲವೊಂದು ಸಂಗತಿಗಳನ್ನು ಕಾಣಲಾಗುವುದಿಲ್ಲ. ಅವನ್ನು ಅನುಭವದಿಂದಲೇ ಅರಿತುಕೊಳ್ಳಬೇಕಾಗುತ್ತಿದೆ. ಅಂತಹ ಸಂದರ್ಭದಲ್ಲಿ ಗಣಿತಶಾಸ್ತ್ರದ ರೀತಿ ಉಪಯುಕ್ತವಾಗುವುದಿಲ್ಲ. ಸೂಕ್ಷ್ಮವಾದ ಅನುಭವದಿಂದಲ್ಲದೆ ಕೆಲವು ಸಂಗತಿಗಳು ಗೋಚರವಾಗುವುದಿಲ್ಲ. ಏಕೆಂದರೆ ಕಲೆಯ ವಿವಿಧ ಪದರುಗಳಿಗಾಗಿ ನಾವು ತತ್ತ್ವಗಳನ್ನು ಹುಡುಕಿಕೊಂಡಿಲ್ಲ. ಕೆಲವು ತರ್ಕಕ್ಕೆ ಸಿಲುಕುವುದಿಲ್ಲ. ಆತ್ಮಾನುಭವದ ಹಾದಿ ಗಣಿತಶಾಸ್ತ್ರಕ್ಕೆ ಒಗ್ಗುವುದಿಲ್ಲ. ಆಗ ಗಣಿತಶಾಸ್ತ್ರದ ಹಾದಿಯಿಂದ ಹೊರಟು ನಗೆಗೀಡಾಗಬೇಕಾದೀತು' ಎಂಬ ಪೋಸ್ಕಲ್‌ನ ಉಕ್ತಿಗಳನ್ನು ಈ ಸಂದರ್ಭದಲ್ಲಿ ನಾವು ಗಮನಿಸಬೇಕು.

ಒಂದು ಶತಮಾನದ ಹಿಂದಿನ ವಿಮರ್ಶಕರು, ಹೆಮ್ಮೆ ಉದ್ಧಟತನಗಳಿಗೆ ಬಲಿಯಾಗಿದ್ದರೆಂಬುದನ್ನು ನಾವು ಲಕ್ಷ್ಯಕ್ಕೆ ತಂದುಕೊಳ್ಳಬೇಕು. ಇಂದೂ ಕೂಡ ಅಂತಹ ತಪ್ಪುಗಳು ನಡೆಯುತ್ತಿವೆ. ಆದರೆ ಅವುಗಳಿಗೆ ಸುಧಾರಿಸಿದ ತತ್ತ್ವಗಳ ಆವರಣ ಹಾಕಿ ಹೇಳಬಹುದು, ಅಷ್ಟೇ. ಇಂದು ಗ್ರಂಥರಾಶಿ ವಿಪುಲವಾಗಿರುವುದರಿಂದ ಹಿಂದಿನಷ್ಟು ವಿವರವಾದ ವಿಭಜನೆಗೆ ತೊಡಗಲು ಈಗ ಅವಕಾಶ ದೊರೆಯುವುದಿಲ್ಲ. ಹಿಂದೆ ಪುಸ್ತಕ ವಿಮರ್ಶೆಯೆಂಬ ಹೆಸರಿನಲ್ಲಿ ಪ್ರಬಂಧಗಳನ್ನೇ ಬರೆಯಲು ಸಾಧ್ಯವಾಗುತ್ತಿತ್ತು. ಮೆಕಾಲೆ, ಜೆಫ್ರಿ ಮುಂತಾದವರ ಉದಾಹರಣೆಗಳೇ ಈ ಮಾತಿಗೆ ಸಾಕ್ಷಿ. ತಮ್ಮ ಪಾಂಡಿತ್ಯವನ್ನು ಮೆರೆಯಿಸಲು ಅಂದಿನ ವಿಮರ್ಶಕರು ಕೆಲವೊಂದು ಪುಸ್ತಕಗಳನ್ನು ಸಾಧನಗಳಾಗಿ ಬಳಸಿಕೊಳ್ಳುತ್ತಿದ್ದರು. ಗ್ರಂಥಕಾರನಿಗಿಂತ ತಮಗೆ ಹೆಚ್ಚಿಗೆ ಗೊತ್ತಿದೆಯೆಂದು ತೋರಿಸಿಕೊಳ್ಳುವ ಹವ್ಯಾಸ ಅವರಿಗಿತ್ತು. ಆದರೂ ಆಗಿನವರು ವಿಮರ್ಶೆಯ ಬಗೆಗೆ ಕೆಲವೊಂದು ಸಿದ್ಧಾಂತಗಳನ್ನು ಸ್ಥಾಪಿಸಿದರು. ವಿಮರ್ಶಾ ಲೇಖನಗಳ ಸಂಗ್ರಹಗಳೇ ಪುಸ್ತಕ ರೂಪದಲ್ಲಿಯೂ ಬಂದುವು. ಅವರ ಹೊಗಳಿಕೆ, ತೆಗಳಿಕೆಗಳು ಪರಿಣಾಮಕಾರಿಯಾಗಿದ್ದುವು.

ಆದರೆ ಅಂತಹ ವಿಮರ್ಶಕರು ರಾಜಕಾರಣಿಗಳಾಗಿದ್ದರೆಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಮೆಕಾಲೆಯಂತೂ ಸರಿಯೇ. ಹ್ಯಾಜ್‌ಲಿಟ್ ಕೂಡ ಅದೇ ಗುಂಪಿಗೆ ಸೇರಿದವ. ಆದರೆ ಹ್ಯಾಜ್‌ಲಿಟ್ ಲ್ಯಾಂಬ್‌ನೊಂದಿಗೆ ವಿಮರ್ಶೆ

ಯನ್ನು ಕೈಕೊಂಡಾಗ ಆತ್ಮಾನುಭವದ ರೀತಿಯನ್ನು ಅನುಸರಿಸಿ ಗ್ರಂಥಕಾರನ ಹೃದಯವನ್ನು ಅರಿತುಕೊಳ್ಳುವ ಮಾರ್ಗ ಹಿಡಿದ. ಕಾಲ್‌ರಿಜ್‌ನ ಮಟ್ಟಕ್ಕೆ ಬರದಿದ್ದರೂ ಹ್ಯಾಜ್‌ಲಿಟ್, ಲ್ಯಾಂಬ್ ಇವರು ಅಂತರಂಗಭೇದಿಯಾದ ಮಾರ್ಗವನ್ನು ಹಿಡಿದು ಗ್ರಂಥಕಾರರಲ್ಲಿ, ಅವರ ಬರವಣಿಗೆಯಲ್ಲಿ ವಿವಿಧ ಮಟ್ಟಗಳನ್ನು ನಿರ್ಧರಿಸಲು ಕಾರಣರಾದರು. ಅವರಿಗೆ ವಿಶಾಲ ದೃಷ್ಟಿಯೂ ಇತ್ತು. ಲ್ಯಾಂಬ್ ಹೀಗೆ ಹೇಳಿದ : 'ಶುದ್ಧವೆನ್ನುವ ತತ್ತ್ವ, ಚಟಗಳ ಆಧಾರ ದಿಂದ ತಮ್ಮನ್ನು ಇತರ ಜನರಿಂದ ಬೇರ್ಪಡಿಸಿಕೊಳ್ಳುವವರು ತಮ್ಮದೇ ಆದ ಒಂದು ಗುಂಪನ್ನು ನಿರ್ಮಿಸಿಕೊಳ್ಳುತ್ತಾರೆ. ಇಂತಹವರು ಸಂಕುಚಿತ ಮನೋ ಭಾವನೆಯನ್ನು ಬೆಳಸುತ್ತಾರೆ.'

ಹ್ಯಾಜ್‌ಲಿಟ್ 'ಒರಿಜಿನಾಲಿಟಿ'ಯ ವ್ಯಾಖ್ಯೆಯನ್ನು ಹೀಗೆ ಸೂಚಿಸು ತ್ತಾನೆ : ಸಾಮಾನ್ಯ ರೂಢಿಯ ಆಚೆಗಿರುವುದನ್ನು ಸಾಮಾನ್ಯ ಜನತೆ ಅರಿತು ಕೊಳ್ಳಲಾರದು. ಕಾರಣ 'ಒರಿಜಿನಾಲಿಟಿ' ಮತ್ತು 'ಸಿಂಗ್ಯುಲಾರಿಟಿ' ಇವೆರಡರಲ್ಲಿಯ ಅಂತರವನ್ನು ಅದು ಗ್ರಹಿಸಲಾರದು. ಪೂರ್ವಗ್ರಹವು ಸ್ವಪಕ್ಷ ಪರಪಕ್ಷಗಳ ಮಾತಿಗೆ ಕಿವಿಗೊಡುವುದಿಲ್ಲ. ಸತ್ಯದ ಸ್ವಭಾವದ ತೀವ್ರ ತರವಾದ ಯೋಚನೆಯಿಂದ ಮನ ತುಂಬಿರುವುದೇ 'ಒರಿಜಿನಾಲಿಟಿ.' ಅಂತಹ ತೀವ್ರವಾದ ಯೋಚನೆಯ ಭಾವದಿಂದ ಮನವು ಬಿಡುಗಡೆ ಹೊಂದುವುದಿಲ್ಲ. ಪ್ರಮಾಣ-ಉದಾಹರಣೆಗಳೂ ಅಂತಹ ಬಿಡುಗಡೆಗೆ ನೆರವಾಗುವುದಿಲ್ಲ. ಆಗ ಮನವು ತನ್ನದೇ ಆದ ರೀತಿಯನ್ನು ಅನುಸರಿಸುವಷ್ಟು ಆ ಭಾವನೆ ಪ್ರಬಲ ವಾಗಿರುತ್ತಿದೆ. ಸತ್ಯದ ಪ್ರಖರವಾದ ಅನಿಸಿಕೆಯೇ ಅದರ ತಿರುಳು. ಸ್ವಭಾವ ವೇದ್ಯವಾದ ಆಂತರಿಕ ಹಂಬಲವದು. ಅದು ಇತರರಿಗೆ ವೇದ್ಯವಾಗುವ ಪೂರ್ವದಲ್ಲಿ, ಅದೇನೆಂದು ಮನಸ್ಸಿಗೆ ಗೋಚರವಾಗುವುದಕ್ಕೆ ಮೊದಲೇ ಅದು ಹೊಳೆಯುತ್ತಿದೆ. ಅತ್ಯುಕ್ತಿ, ಶಬ್ದಾಡಂಬರಗಳು ಕಲ್ಪನೆಯ ಅಭಾವವನ್ನು ಸೂಚಿಸುವಂತೆ, ವಿರೋಧಾಭಾಸ, ವಿಕ್ಷಿಪ್ತತೆಗಳು 'ಒರಿಜಿನಾಲಿಟಿ'ಯ ಅಭಾವವನ್ನು ಸೂಚಿಸುತ್ತಿವೆ. ಏಕೆಂದರೆ ಇವು ಕೃತಕತೆಯ, ಶಕ್ತಿಹೀನತೆಯ ಆಗರಗಳಾಗಿವೆ.'

ಇದನ್ನು ಮೀರಿಸುವ ವ್ಯಾಖ್ಯೆ ಬೇರೊಂದಿಲ್ಲವೆಂದು ನಾನು ತಿಳಿಯು ತ್ತೇನೆ. ಕೃತಿಯ ಬೆಲೆ ನಿರ್ಣಯಿಸಲು ಬೇಕಾಗುವ ಸಹೃದಯತೆಯಿಲ್ಲದ

ವಿಮರ್ಶಕರನ್ನು ಕುರಿತು ಈ ವ್ಯಾಖ್ಯೆ ಮಹತ್ತ್ವದ್ದಾಗಿದೆ. ಹ್ಯಾಜ್‌ಲಿಟ್‌ನ ಪೂರ್ತಿಯಾದ ಬರವಣಿಗೆಯನ್ನು ಅರ್ಥಮಾಡಿಕೊಂಡವರು ಆತನನ್ನು ತೆಗಳಲಾರರು. ಮುಂಜಾವಿನ ಪತ್ರಿಕೆಗಾಗಿ ಆತನು ಹಿಂದಿನ ರಾತ್ರಿ ಬರೆದ ಲೇಖನಗಳನ್ನು ಟೀಕಿಸಲು ಮಾತ್ರ ಸಾಧ್ಯವಿದೆ. ಲ್ಯಾಂಬ್ ಕೂಡ ಶ್ರೇಷ್ಠ ಪ್ರತಿಯ ವಿಮರ್ಶಕ. ಅವನು ಒಳ್ಳೆಯ ಪುಸ್ತಕಪ್ರೇಮಿ. ಕೊಚ್ಚ ಹೊಸ ಪುಸ್ತಕವನ್ನೂ ಕೂಡ ಪ್ರಾಚೀನ ಗ್ರಂಥದಂತೆ ಸುಪರಿಚಿತ ಮಾಡಿಕೊಡಬಲ್ಲ ಸಾಮರ್ಥ್ಯ ಅವನಿಗಿತ್ತು.

ಸೈಂಟ್ ಬೆನ್ವೆಯು ಪುಸ್ತಕಾವಲೋಕನ, ಗ್ರಂಥವಿಮರ್ಶೆಗಳನ್ನು ಸಮನ್ವಯಗೊಳಿಸಲು ಪ್ರಯತ್ನಿಸಿದವರಲ್ಲಿ ಮೊದಲಿಗನು. ಆತನು ಆಧುನಿಕ ಮಾರ್ಗದ ಶ್ರೇಷ್ಠ ವಿಮರ್ಶಕರ ಸಾಲಿಗೆ ಸೇರುತ್ತಾನೆ. ಒಂದು ವಾರದ ಏಳು ದಿನಗಳಲ್ಲಿ ಆತನು ಮೊದಲಿನ ಐದು ದಿನಗಳನ್ನು ಒಂದು ಗ್ರಂಥವನ್ನು ಕುರಿತು ಲೇಖನ ಸಿದ್ಧಗೊಳಿಸಲು, ಆರನೆಯ ದಿನವನ್ನು ಕರಡು ತಿದ್ದಲು, ಏಳನೆಯದನ್ನು ವಿಶ್ರಾಂತಿಗೆಂದು ವಿನಿಯೋಗಿಸುತ್ತಿದ್ದ. ಹೊಸ ಪುಸ್ತಕವನ್ನು ಕುರಿತು ಅವಸರದ್ದಲ್ಲದ, ಬೆಲೆಬಾಳುವ ಟೀಕೆ ಟಿಪ್ಪಣಿ ಬರೆಯುವ ಹಾಗೂ ಪುಸ್ತಕಾವಲೋಕನ, ಗ್ರಂಥವಿಮರ್ಶೆಗಳನ್ನು ಸಮನ್ವಯಿಸಿಕೊಂಡ ಸೈಂಟ್ ಬೆನ್ವೆಯ ಮಾದರಿಯನ್ನು ಮುಂದುವರಿಸಿದವರಲ್ಲಿ ಇಂದು ಮಕಾರ್ಥಿ ಒಬ್ಬರಾಗಿದ್ದಾರೆ. ಸೈಂಟ್ ಬೆನ್ವೆನ ಗುರಿಯು ಆಸಕ್ತಿಗೆ ಅವಕಾಶ ಕೊಡದ ಮನೋಭೂಮಿಕೆಯಾಗಿತ್ತು. ತಾತ್ತ್ವಿಕ ಇಲ್ಲವೆ ಶುಷ್ಕ ಪಾಂಡಿತ್ಯದ ಹಾದಿ ಅವನದಾಗಿರಲಿಲ್ಲ. ಪಾಂಡಿತ್ಯದಿಂದ ತುಂಬಿದ್ದರೂ ಆತನು ಮಾನವೀಯತೆಯನ್ನು ಗುರುತಿಸುವ ಮಾರ್ಗ ಹಾಕಿಕೊಟ್ಟ. ತನ್ನೆದುರು ಇದ್ದ ಗ್ರಂಥದ ಬಗೆಗೆ ಆತನು ಹೆಚ್ಚು ಆಸ್ಥೆವಹಿಸುತ್ತಿದ್ದನಲ್ಲದೆ ಕಲೆ, ಸಾಹಿತ್ಯಗಳನ್ನು ಕುರಿತು ತನ್ನ ಪಾಂಡಿತ್ಯದ ಮೆರವಣಿಗೆಗಾಗಿಯಲ್ಲ ; ಕೆಲವರು ಅತನನ್ನು ಪ್ರಯೋಜನವಾದಿಯೆಂದು ತಿಳಿಯಬಹುದು. ಆದರೆ ಆತನೊಬ್ಬ ಆದರ್ಶ ವಿಮರ್ಶಕ ; ಅಂತಹರಲ್ಲಿ ಮೊದಲಿಗನೂ ಅಹುದು.

ಇಂದು ಸೈಂಟ್ ಬೆನ್ವೆ ಜೀವಿಸಿದ್ದರೆ ಆತನ ಕಾರ್ಯ ತೊಡಕಿನದಾಗುತ್ತಿತ್ತು. ಆತನ ಕಾಲದಲ್ಲಿ ಈಗಿನಂತೆ ಹದಿನೈದು ಸಾವಿರದಷ್ಟು ಗ್ರಂಥಗಳು ಪ್ರಕಟವಾಗುತ್ತಿರಲಿಲ್ಲ. ಅಲ್ಲದೆ ಪ್ರಕಟವಾದ ಆಗಿನ ಗ್ರಂಥಗಳಿಗೆ ದೊಡ್ಡವು,

ಘನವಾದುವು, ಅಶ್ರುತ ಸತ್ಯ ಎಂಬ ಹಣೆಪಟ್ಟಿಗಳೂ ಇರುತ್ತಿರಲಿಲ್ಲ. ಇಂದಿನಂತೆ ಅಂದು ಪ್ರಕಾಶಕರ ಪ್ರಚಾರವೂ ನಡೆಯುತ್ತಿರಲಿಲ್ಲ. ಸ್ಪೈಂಟ್ ಬೆನ್ವೆ ಪ್ರಕಾಶಕರ ಜಾಹೀರಾತು ಓದುತ್ತಿರಲಿಲ್ಲ; ಪ್ರಕಾಶಕ ಸಂಸ್ಥೆಯ ಭೋಜನ ಕೂಟಕ್ಕೂ ಹೋಗುತ್ತಿರಲಿಲ್ಲ. ಆಗ ಪುಸ್ತಕದ ವ್ಯಾಪಾರ ಸಂಘಟಿತವಾಗಿದ್ದಿಲ್ಲ. ಅವನು ವಿರಾಮವಾಗಿ ತನಗೆ ಬೇಕೆನಿಸಿದ ಪುಸ್ತಕದ ವಿಮರ್ಶೆಗೆ ತೊಡಗುತ್ತಿದ್ದ.

ಈಗ ಕಾಲ ಬದಲಾಗಿದೆ. ಗ್ರಂಥಸಂಖ್ಯೆ, ವಿಷಯವೈವಿಧ್ಯ ಬೆಳೆದಿವೆ. ಕಾದಂಬರಿಯ ಸಂಖ್ಯೆಯಂತೂ ವಿಪುಲವಾಗಿ ಬೆಳೆದಿದೆ. ಕವಿತೆ ಕ್ಷಣಕಾಲ ತನ್ನ ಮಹತ್ತ್ವವನ್ನು ಕಳೆದುಕೊಂಡಂತಿದೆ. ಲಾಯಬ್ರರಿಯ ಓದುಗರು ವಿಮರ್ಶ ಲೇಖನದ ಮಾರ್ಗದರ್ಶನವನ್ನೂ ನಿರೀಕ್ಷಿಸುವುದಿಲ್ಲ. ಅವಸರದ ಈ ಮಾರ್ಗದಲ್ಲಿ ಹಸಿವೆಯನ್ನು ಕಳೆದುಕೊಂಡು ಊಟಮಾಡುವಂತಹ ಪರಿಸ್ಥಿತಿ ಬಂದಿದೆ. ಅಂತೆಯೆ ಪ್ರತಿಯೊಂದಕ್ಕೂ ಹೆಚ್ಚು ಹೆಚ್ಚು ಮಸಾಲೆ ಬೇಕೆನಿಸುತ್ತಿದೆ. ಪುಸ್ತಕಾವಲೋಕನ ಚಿಕ್ಕದೂ ಸ್ಪಷ್ಟವಾದುದೂ ತೀರ ಹೊಸದೂ ಆಗಬೇಕಾಗಿದೆ. ಮಸಾಲೆಯನ್ನು ಕುರಿತ ಈ ಬೇಡಿಕೆಯು ಕೆಲಕಾಲ ಹಿಂದೆ ಆರಂಭವಾಯಿತು. ಕಾಲ್‌ರಿಜ್‌ನ ಕಾಲಾವಧಿಯಲ್ಲಿಯೇ ಉದ್ಧಟತನ, ಅಹಂಭಾವಗಳ ಗೊಣಗಾಟ ಕೇಳಬರಹತ್ತಿತ್ತು. ಕಳೆದ ಶತಮಾನದಲ್ಲಿ 'ಸಾಟರ್ಡೆ ರಿವ್ಯೂ' ಪತ್ರಿಕೆಯಲ್ಲಿ ವಿಘಾತುಕವೂ ತುಂಬ ಅಪ್ರಾಮಾಣಿಕತನದವೂ ಆದ ಬರೆಹಗಳು ಬರಹತ್ತಿದುವು. ಅಂದು ಸಿಕ್ಕಾಬಟ್ಟೆ ಟೀಕೆಗೆ ಗುರಿಯಾದ ಗ್ರಂಥಗಳಲ್ಲಿ ಕೆಲವು ಈಗ ಶ್ರೇಷ್ಠ ಕೃತಿಗಳಾಗಿ ಉಳಿದಿವೆ. ಒಂದು ಉದಾಹರಣೆಯನ್ನು ನೋಡೋಣ. ಫ್ರೀಮನ್ ಎಂಬವನು 'ಸಾಟರ್ಡೆ ರಿವ್ಯೂ' ಪತ್ರಿಕೆಯಲ್ಲಿ 'ಲೈಫ್ ಆಫ್ ಫ್ರಾಡ್' ಎಂಬ ಗ್ರಂಥವನ್ನು ವಿಮರ್ಶಿಸುತ್ತ ಆ ಗ್ರಂಥದಲ್ಲಿಯ ಅವತರಣಿಕೆಗಳು 'ಖೊಟ್ಟಿ'ಯೆಂದೂ, ಅವು ಇತಿಹಾಸಕ್ಕೆ ವಿರೋಧಿಯಾಗಿವೆಯೆಂದೂ ಹೇಳಿದ. ಈ ಹೇಳಿಕೆಯನ್ನು ಅನೇಕರು ಕೆಲಕಾಲದ ವರೆಗೆ ಸತ್ಯವೆಂದು ನಂಬಿದ್ದರು. ಆದರೆ ಫ್ರೀಮನ್‌ಗೆ ಟ್ಯೂಡರ್ ಕಾಲದ ಸಂಗತಿಯೇನೂ ಗೊತ್ತಿರಲಿಲ್ಲ. ಬೇರೆಯವರ ಸಂಶೋಧನೆಯಲ್ಲಿಯ ಕೆಲವು ಮಾತುಗಳನ್ನು ಆತನು ಆರಿಸಿಕೊಂಡು ತನ್ನವೆಂದು ಹೇಳಿಕೊಂಡ. ತನ್ನ ಈ ಬರೆಹದಿಂದಾಗಿ ಫ್ರೀಮನ್‌ನು ಪಾಠಶೋಧನೆಯಲ್ಲಿ ಅಪ್ರತಿಮ ಪ್ರಾಮಾಣಿಕತನವನ್ನು ತೋರಿದ ಗ್ರಂಥಕರ್ತನೊಬ್ಬನ ಮಾನಹಾನಿಗೈಯಲು ಕಾರಣನಾದ. ಈಗಲೂ ಇಂತಹ ಫ್ರೀಮನ್‌ರು

ಇದ್ದಾರೆ. ಅಂತಹರು ಸಂಸ್ಕೃತಿ, ಸುವಿದ್ಯೆ ಎಂಬ ಹಣೆಪಟ್ಟಿಗಳನ್ನು ಅಂಟಿಸಿಕೊಂಡ ಪತ್ರಿಕೆಗಳಲ್ಲಿ ತಮ್ಮ 'ಕಾಯಕ' ನಡೆಸುತ್ತಿದ್ದಾರೆ.

ವಿಘಾತುಕವಾದ ಪುಸ್ತಕಾವಲೋಕನದ ವಿಷಯಕ್ಕೆ ಪ್ರತಿಯಾಗಿ ಸೂಚಿಸಬೇಕಾದ ಇನ್ನೊಂದು ಬಗೆಯ ಪುಸ್ತಕಾವಲೋಕನವಿದೆ. ಅದೆಂದರೆ ಕೇವಲ ಹಣಕ್ಕಾಗಿ ಬರೆಯಲಾಗುವ ಬರೆವಣಿಗೆ. ಅದು ನೀರಸವಾದುದೂ ಅಂಜುಬುರುಕತನದಿಂದಾಗಿ ಒಳ್ಳೆಯ ಮಾತನ್ನಾಡುವಂತಹುದೂ ಆಗಿದೆ. ಪುಸ್ತಕಾವಲೋಕನಗಳನ್ನೇ ಹೆಚ್ಚಾಗಿ ಪ್ರಕಟಿಸುತ್ತಿದ್ದ ಪತ್ರಿಕೆಗಳ ಕಾಲದಲ್ಲಿ ಅದು ಹುಟ್ಟಿತು. ಮಸಿಯಲ್ಲಿ ಬಿದ್ದ ಹುಳವು ಕಾಗದದ ಮೇಲೆ ಹರಿದಾಡುವ ರೀತಿಯಲ್ಲಿ ಅದು ಬೆಳೆದುಬಂದಿತು. ಸ್ವತಂತ್ರ ಹಾಗು ಪ್ರಚೋದಿತ ಬರೆವಣಿಗೆಗಳಲ್ಲಿಯ ವ್ಯತ್ಯಾಸವನ್ನು ಗಮನಿಸಲು ಅದು ಸಮರ್ಥವಾಗಲಿಲ್ಲ. ಅಂತಹ ಪುಸ್ತಕಾವಲೋಕನ ಗ್ರಂಥವಾಚನಕ್ಕೆ ಪ್ರಚೋದನೆಯನ್ನು ಒದಗಿಸಲೂ ಇಲ್ಲ. ಈ ಬಗೆಯ ಪುಸ್ತಕಾವಲೋಕನ ಈಗಲೂ ಇರುವುದುಂಟು.

ಸಾಹಿತ್ಯತಾರೆ(ಲಿಟರರಿ ಸ್ಟಾರ್ಸ್)ಗಳ ಪುಸ್ತಕಾವಲೋಕನವು ಮತ್ತೊಂದು ಬಗೆಯದಾಗಿದೆ. ಗ್ರಂಥಗಳಿಗೆ ತತ್ಕಾಲೀನ ಯೋಗ್ಯತೆಯನ್ನು ದೊರಕಿಸಿಕೊಟ್ಟ ಇಂತಹ ತಾರೆಗಳಲ್ಲಿ ಇಲ್ಲಿ ಮೂವರನ್ನು ಉಲ್ಲೇಖಿಸಬಹುದು :

೧. ಟಿ. ಪಿ. ಒಕೊನೋರ್
೨. ರಾಬರ್ಟ್ಸನ್ ನಿಕೊಲ್
೩. ಕ್ಲೆಮೆಂಟ್ ಷಾರ್ಟರ್

ಟಿ. ಪಿ. ಒಕೊನೋರ್ ಪುಸ್ತಕಗಳ ಪರಿಚಯದೊಂದಿಗೆ ತನ್ನ ಅಭಿಪ್ರಾಯಗಳನ್ನು, ಪ್ರಶಸ್ತಿಯನ್ನು ಸೂಚಿಸುತ್ತಿದ್ದ. ಇವನ ಅವಲೋಕನಗಳನ್ನು ಓದುವುದು ಪುಸ್ತಕದ ವಾಚನಕ್ಕೆ ಸಹಾಯಕಾರಿಯಾಗುತ್ತಿತ್ತು. ಇದು ಪ್ರಕಾಶಕರ ದೃಷ್ಟಿಯಿಂದ ಅನುಕೂಲವಾಗಿತ್ತು.

ನಿಕೊಲ್‌ನು ಜಾಣನೂ, ಗ್ರಂಥಾಭಿರುಚಿಯುಳ್ಳವನೂ ಆಗಿದ್ದು ತನ್ನ ಕಾಲದ ತರುಣ ಲೇಖಕರ ಯೋಗ್ಯತೆಯನ್ನು ಗುರುತಿಸುವುದರಲ್ಲಿ ಮೊದಲಿಗನಾಗಿದ್ದ. ಇವನ ಪದ್ಧತಿಯು ಓಕೊನೋರನ ಹಾಗೆಯೇ ಇದ್ದು ಹೆಚ್ಚು ಪರಿಣಾಮಕಾರಿಯಾಗಿತ್ತು. ಇವನು ಆವುದೊಂದು ಪುಸ್ತಕದ ದೋಷಗಳನ್ನು

ಎತ್ತಿಹೇಳಿದಾಗ ಪುಸ್ತಕಪ್ರಪಂಚದಲ್ಲಿ ಕೋಲಾಹಲವೇಳುತ್ತಿತ್ತು. ಷಾರ್ಟೆರನು ಪ್ರಭಾವಶಾಲಿಯಾಗಿದ್ದ. ತನಗಿಂತ ದೊಡ್ಡವರ ಪರಿಚಯಕ್ಕಾಗಿ ಹಾತೊರೆಯುತ್ತಿದ್ದ.

ಈ ಮೂವರೂ ಆ ಕಾಲದಲ್ಲಿ ತಮ್ಮ ಪ್ರಭಾವ ಬೀರಿದರೂ ಇದರಿಂದ ಮುಂದಿನ ತಲೆಮಾರಿನ ತಾರೆಗಳಿಗೆ ಹಾದಿಯನ್ನು ಸಿದ್ಧಗೊಳಿಸಿದಂತಾಯಿತು. ಇವರಿಂದಾಗಿ ಪುಸ್ತಕಗಳು ವಾರ್ತಾಪ್ರಪಂಚದಲ್ಲಿ ಪ್ರಸಿದ್ಧಿಪಡೆದುವು. ಹೊಸ ಪುಸ್ತಕಗಳ ಭಾಷ್ಯಕಾರರಾದ ಈ ಮೂವರೂ ತಮ್ಮ ಕಾಲದ ಶಕ್ತಿಯಾಗಿ ಪರಿಣಮಿಸಿದರು. ಆಗ ಗಾಳಿ ಎತ್ತ ಬೀಸುತ್ತಿತ್ತೆಂಬುದನ್ನು ಇವರ ಮೂಲಕ ತಿಳಿಯುವುದು ಸಾಧ್ಯವಾಗುತ್ತಿತ್ತು. ಸಾಹಿತ್ಯತಾರಾಮಂಡಲೋದಯದ ಮೊದಲಿನ ಪುಸ್ತಕಪ್ರಪಂಚದ ಆದ್ಯರಿವರು.

ಎಡ್‌ಮಂಡ್ ಗಾಸ್ ಬರೆಯುತ್ತಿದ್ದ ಕಾಲವು ಪ್ರಕಾಶಕರ ವಸಂತಸಮಯವೆನ್ನಬಹುದು. ಆತನು ಪ್ರತಿ ವಾರ ' ಸಂಡೆ ಟೈಮ್ಸ್ ' ಪತ್ರಿಕೆಗೆ ಬೆಲೆಯುಳ್ಳ ಲೇಖನ ಬರೆಯುತ್ತಿದ್ದ. ಜೆ. ಸಿ. ಸ್ಕ್ವ್ಯಯರ್‌ರ್ ಲೇಖನಗಳಿಗಿಂತ ಈತನವು ಹೆಚ್ಚಾಗಿ ಗಮನವನ್ನೆಳೆಯುತ್ತಿದ್ದುವು. ಇವರಿಬ್ಬರನ್ನು ಹಾಗೂ ಸ್ಕಾಟ್ ಜೇಮ್ಸ್, ರಾಬರ್ಟ್ ಲಿಂಡ್, ಅರ್ನಾಲ್ಡ್, ಬೆನೆಟ್ ಇವರನ್ನು ಆ ತಾರಾಮಾಲಿಕೆಗೆ ಸೇರಿಸಬೇಕಾಗುತ್ತದೆ. ಈ ತಾರೆಗಳಿಂದಾಗಿ ಪುಸ್ತಕ ವಿಮರ್ಶೆಯು ಹೊಸ ದಿಸೆಗೆ ತಿರುಗಿತು. ಡೇಲಿ ನ್ಯೂಸ್, ನ್ಯೂ ಏಜ್, ಡೇಲಿ ಕ್ರಾನಿಕಲ್ ಈ ಪತ್ರಿಕೆಗಳು ಈ ಬಗೆಯ ಬರೆವಣಿಗೆಗೆ ಅನುವುಮಾಡಿಕೊಟ್ಟುವು. ಸಮಕಾಲೀನ ಗ್ರಂಥಕರ್ತರ ಬೆಲೆ ಕಟ್ಟುವ ಕಾರ್ಯದಲ್ಲಿ ಈ ಲೇಖಕರೂ ಈ ಪತ್ರಿಕೆಗಳೂ ನೆರವಾದುವು.

ಈ ಶತಮಾನದ ಮೊದಲಿನ ಇಪ್ಪತ್ತು ವರುಷಗಳಲ್ಲಿ ಗ್ರಂಥವಿಮರ್ಶೆಗೆ ದೊರೆಯುವ ಹಣದ ಪ್ರತಿಫಲ ಹೆಚ್ಚಾಗಿರಲಿಲ್ಲ. ಜಾಹೀರಾತುಗಳಿಂದ ಉತ್ಪನ್ನ ಹೆಚ್ಚಿಸಿಕೊಳ್ಳುವುದು ಕಾಲಾನುಕ್ರಮದಲ್ಲಿ ಅನಿವಾರ್ಯವಾಯಿತು. ಪುಸ್ತಕಗಳ ಜಾಹೀರಾತುಗಳನ್ನು ಕಡಮೆ ಹಣಕ್ಕಾಗಿ ಪ್ರಕಟಿಸುವುದು ಸಾಧ್ಯವಿಲ್ಲೆಂದು ತೋರಹತ್ತಿತು. ಇದರಿಂದಾಗಿ ಪುಸ್ತಕಗಳ ಜಾಹೀರಾತಿನ ಸ್ಥಳವನ್ನು ಮೊಟಕುಗೊಳಿಸಬೇಕಾಯಿತು. ಅನ್ನ, ಬಟ್ಟೆ, ತಂಬಾಕು ಇತ್ಯಾದಿ ವಸ್ತುಗಳ ಜಾಹೀ

ರಾತುಗಳ ಚಿತ್ರಗಳ ಮಧ್ಯದಲ್ಲಿ ಪುಸ್ತಕದ ಜಾಹೀರಾತು ನುಸುಳಿಕೊಂಡು ಬರಹತ್ತಿತು.

ಆರ್ನಾಲ್ಡ್ ಬೆನೆಟ್‌ನು ಈ ಪರಿಸ್ಥಿತಿಯನ್ನು ಬದಲಿಸಲು ಕಾರಣನಾದ. ಹೊಸ ಪುಸ್ತಕಗಳಿಗೆ ಬಿಸಿ ಸುದ್ದಿಯ ಮಹತ್ತ್ವವನ್ನು ಆತನು ತಂದುಕೊಡ ಹತ್ತಿದ. ಹೊಸ ಪುಸ್ತಕಗಳ ಬಗೆಗೆ ನವೀನ ಆಸ್ಥೆಯುಂಟಾಗಹತ್ತಿತು. ಸಮಕಾಲೀನ ಸಾಹಿತ್ಯದಲ್ಲಿ ಅಭಿರುಚಿಯುಳ್ಳವರೆಲ್ಲ ಆತನ ಲೇಖನವುಳ್ಳ 'ಇವನಿಂಗ್ ಸ್ಟ್ಯಾಂಡರ್ಡ್' ಪತ್ರಿಕೆಯನ್ನು ಪ್ರತಿ ಗುರುವಾರ ಓದಿಯೇ ಓದುತ್ತಿದ್ದರು. ಸಾಹಿತ್ಯತಾರೆಗಳ ಸ್ಥಾನ ಈಗ ಭದ್ರವಾಯಿತು. 'ಇವನಿಂಗ್ ನ್ಯೂಸ್' ಪತ್ರಿಕೆಗೆ ಮೊದಲು ಜೆ. ಬಿ. ಪ್ರೀಸ್ಟ್ಲಿ, ಅನಂತರ ಈ ಲೇಖಕ (ಫ್ರ್ಯಾಂಕ್ ಸ್ವಿನ್‌ರಟನ್) ತಾರೆಗಳಾದರು. ಮೊಕಾಂಜಿಯ ಹೆಸರೂ ಈ ಗುಂಪಿಗೆ ಸೇರುತ್ತದೆ. ಈ ವಿಮರ್ಶಕರು ಏಕಕಾಲಕ್ಕೆ ಮೂರು ನಾಲ್ಕು ವಿಮರ್ಶೆಗಳನ್ನು ವಿಮರ್ಶಿಸಿ ಗ್ರಂಥಕರ್ತರಿಗೆ ಉಚಿತ ಮಾರ್ಗಪ್ರದರ್ಶನವನ್ನು, ಓದುಗರಿಗೆ ಮನರಂಜನೆಯನ್ನು ಒದಗಿಸಹತ್ತಿದ್ದರು. ಪ್ರಕಾಶಕರ ಜಾಹೀರಾತುಗಳು ಬೆಳೆಯುಹತ್ತಿದುವು. ಪುಸ್ತಕಗಳ ವ್ಯಾರಾಟ ಹೆಚ್ಚಿತು. ಗ್ರಂಥಗಳ ವ್ಯವಹಾರ ಹೆಚ್ಚುತ್ತಿರುವ ಈ ಕಾಲದ ವೈಶಿಷ್ಟ್ಯವನ್ನು ಕುರಿತು ಜಾರ್ಜ್ ಮೂರ್‌ನ 'ಸಾಹಿತ್ಯ ಸಾಹಿತ್ಯವಾಗಿ ಉಳಿಯಲಿಲ್ಲ; ವ್ಯವಹಾರವಾಯಿತು' ಎಂಬ ಮಾತು ನಿಜವೆಂದು ಒಪ್ಪಬೇಕಾಗುತ್ತಿದೆ.

ಆರ್ನಾಲ್ಡ್ ಬೆನೆಟ್‌ನ ಮರಣದೊಂದಿಗೆ ಸಾಹಿತ್ಯತಾರಾಮಂಡಲವೂ ಇಳಿಮುಖವಾಗಹತ್ತಿತು. ಇಂದು ಅದು ಉಳಿದಿದ್ದರೂ ಮೊದಲಿನ ಕಾಂತಿ ಅದಕ್ಕಿಲ್ಲ. ಇಂದು ಬರುತ್ತಿರುವ ಹೊಸ ಪುಸ್ತಕಾವಲೋಕನಗಳಲ್ಲಿ ಎಲ್ಲರೂ ಓದಲೇಬೇಕಾದ ವಿಷಯವಿರುವುದೆಂದು ಹೇಳಲು ಬರುವಂತಿಲ್ಲ.

ತಾರಾಮಂಡಲದ ವಿಮರ್ಶೆ ಪರಿಪೂರ್ಣವೆಂದಾಗಲಿ, ಸರ್ವಸಮ್ಮತವೆಂದಾಗಲಿ ಅಭಿಪ್ರಾಯವಲ್ಲ. ಆದರೆ ಅದು ಸರಿಯಾದ ವಿಮರ್ಶೆಯನ್ನು ಒದಗಿಸುವ ಉಚಿತ ಕಾರ್ಯವನ್ನು ಮಾಡಿತೆಂದು ಒಪ್ಪಬೇಕಾಗಿದೆ. ಅಯಶಸ್ವಿ ಗ್ರಂಥಕರ್ತನು ಬರೆದ ವಿಮರ್ಶೆ ಯಶಸ್ವಿ ಗ್ರಂಥಕರ್ತನ ವಿಮರ್ಶೆಗಿಂತ ಹೆಚ್ಚು ಒಳ್ಳೆಯದೆಂಬ ವಾದದಲ್ಲಿ ಹುರುಳೇನೂ ಇಲ್ಲ. ಅಯಶಸ್ವಿ ಗ್ರಂಥಕರ್ತ ತನ್ನ ಮಹತ್ವಾಕಾಂಕ್ಷೆ ನೆರವೇರದಿರುವ ನಿರಾಶೆಯಿಂದ ಕೂಡಿರುತ್ತಾನೆ. ತಾನಿನ್ನೂ

ಯಶಸ್ವಿಯಾಗಲಿಲ್ಲವೆಂಬ ಭೀಕರ ರೋಗದಿಂದ ಯಶಸ್ವಿ ಗ್ರಂಥಕಾರನು ಪೀಡಿತನಾಗಿರುವುದಿಲ್ಲ. ಅಂತೆಯೇ ಆತನು ತನ್ನ ಹಾಗು ತನ್ನಂತೆಯೇ ಯಶಸ್ವಿಯಾದ ಇತರ ಕೃತಿಗಳ ಸಾಮ್ಯ-ವೈಷಮ್ಯ ಸ್ಥಾಪಿಸಲು ಹೆಣಗ ಬೇಕಾಗಿಲ್ಲ. ಅವನು ಹೆಮ್ಮೆಯಿಂದ, ಆತ್ಮತೃಪ್ತಿಯಿಂದ ಕೂಡಿರುವ ದೋಷಕ್ಕೆ ಪಕ್ಕಾಗಿರಬಹುದು. ರಾಕ್ಷಸಬಲವಿದ್ದರೂ ರಾಕ್ಷಸನಂತೆ ಅದನ್ನು ಉಪಯೋ ಗಿಸಬಾರದೆಂಬ ನ್ಯಾಯ ಅವನಿಗೆ ತಿಳಿದಿದ್ದರೆ ಸಾಕು. ಯಶಸ್ವಿ ಗ್ರಂಥಕರ್ತ ನೊಂದಿಗೆ ನಡೆಯುವ ಹೋರಾಟಕ್ಕೆ ಈರ್ಷೆಯು ಕಾರಣವಾಗಿರುತ್ತದೆ.

ತಿರಸ್ಕಾರದಿಂದ ಕೂಡಿದ ವಿಮರ್ಶೆಗೆ ಮೇಲ್ಪಟ್ಟ ವಿಮರ್ಶಾತತ್ತ್ವಗಳಷ್ಟೇ ಕಾರಣವಾಗಿರುವುದಿಲ್ಲ; ತನ್ನ ಗುಂಪಿನಲ್ಲಿಲ್ಲದವರ ಅವಹೇಳನ ಮಾಡುವ ಉದ್ದೇಶವೂ ಕಾರಣವಾಗಬಹುದು. ಸುಪ್ರಸಿದ್ಧ ಗ್ರಂಥಕರ್ತರ ಬಗೆಗೆ ಹೀಗೆ ಆಗುವುದುಂಟು. ಈ ಬಗೆಯ ವಿಮರ್ಶೆಯಲ್ಲಿ ಒಳ್ಳೆಯದನ್ನು ಮುಚ್ಚಿಡುವ, ದೋಷವನ್ನು ಕೆದರುವ, ತನಗೆ ಬೇಕಾದವರನ್ನು ಮತ್ತೆ ಮತ್ತೆ ಹೊಗಳುವ ಸಂದರ್ಭ ತಂದುಕೊಳ್ಳುವ ಪ್ರವೃತ್ತಿ ಕಂಡುಬರುತ್ತದೆ. ಇದೊಂದು ಕೀಳು ಮಟ್ಟದ ರಾಜಕೀಯ ವಿಧಾನ. ಇಂದಿನ ವಿಮರ್ಶೆ ತನ್ನ ಶಕ್ತಿಯನ್ನು ಕಳೆದುಕೊಂಡಿರುವುದಕ್ಕೆ ಇದೇ ಮುಖ್ಯ ಕಾರಣ. ಇಂದಿನ ವಿಮರ್ಶೆಯಲ್ಲಿ ಹಣ ಕಾಸಿನ ದೃಷ್ಟಿಯಿದೆಯೆಂಬ ಆರೋಪವೂ ಇದೆ. ಅದು ಕೆಲಮಟ್ಟಿಗೆ ನಿಜವೂ ಅಹುದು. 'ಅಮೂಲ್ಯ ಕೃತಿ' ಎಂಬ ರಬ್ಬರ್ ಸ್ಟಾಂಪ್ ಉಪಯೋಗಿಸು ವವರೂ ಇದ್ದಾರೆ. ವಿವೇಚನೆಯಿಲ್ಲದ ವಿಶೇಷಣಗಳ ಪ್ರಯೋಗವೂ ಅನೇಕ ಸಲ ಕಂಡುಬರುತ್ತಿದೆ. ವಿಶೇಷಣಗಳ ಅತಿಯಾದ ಉಪಯೋಗ ಅವುಗಳ ಅರ್ಥವನ್ನೇ ಹಾಳುಮಾಡುವುದೂ ಉಂಟು. 'ಉದಾತ್ತ', 'ಅಮೋಘ' ಎಂಬ ಶಬ್ದಗಳನ್ನು ಕಿವಿಯಲ್ಲಿ ಭೇದಿಸುವ ಎತ್ತರದ ಧ್ವನಿಯಲ್ಲಿ ಉಚ್ಚರಿಸು ವಾಗ ಮೆಲುಮಾತಿನ ಪ್ರಶಂಸೆ ಗಮನಕ್ಕೆ ಬರದೆ ಹೋಗಬಹುದು. ಸಂಪಾದಕರ ಅವಿವೇಕವೂ ಇದಕ್ಕೆ ಕಾರಣವಾಗುವುದರಿಂದ ಇದರ ಹೊಣೆಯನ್ನು ಅವರು ಒಪ್ಪಿಕೊಳ್ಳಬೇಕಾಗುತ್ತಿದೆ. ಪ್ರಕಾಶಕರ ಆಸೆ-ಅಭಿಲಾಷೆಗಳನ್ನು ಮನ್ನಿಸುವ ಪ್ರವೃತ್ತಿಯೂ ಇರುವುದುಂಟು. ಈ ಕಾರಣಗಳಿಂದಾಗಿ ಇಂದಿನ ವಿಮರ್ಶೆ 'ಕೊಡಕೊಳ್ಳುವ' ಬರವಣಿಗೆಯಾಗಹತ್ತಿದೆ. ಇದರ ಪರಿಣಾಮವೆಂದರೆ ವಿಶೇಷಣಗಳ ಅತಿರೇಕ, ಕೆಲವರ ಕೃತಿಗಳ ಬಗೆಗೆ ಸಲ್ಲದ ಆದರ, ಇತರರ

ಬಗೆಗೆ ಅನಾದರ. ಇದೇ ರೀತಿ ಇನ್ನೂ ಮುಂದುವರಿದರೆ, ಫ್ರೆಂಚ್ ಪತ್ರಿಕೆಗಳಲ್ಲಿ ನಡೆಯುವಂತೆ ಇಲ್ಲಿಯೂ ವಿಮರ್ಶೆಗಳನ್ನು ಹಣಕ್ಕಾಗಿ ಕೊಂಡುಕೊಳ್ಳುವ ಕಾಲವೂ ಸಮೀಪಿಸೀತು. ಇದು ಗರ್ಹಣೀಯವಾದುದು.

ಸಹನೆಯಿಂದ ಕೂಡಿದ ವಿವೇಕಪೂರ್ಣ ವಿಮರ್ಶೆ ಮಾಡುವುದು ಕಠಿಣ. ಆದರೆ ಮನಬಂದಂತೆ ಬೈದು ಬರೆಯುವುದು ಸುಲಭ. ಅನನುಭವಿಕ ವಿದ್ಯಾರ್ಥಿಯು ಕೂಡ ಇಂತಹದನ್ನು ಸಹಜವಾಗಿ ಬರೆಯಬಲ್ಲ. ಅವನಿಗೆ ಹೊಣೆಗಾರಿಕೆಯ ಅಂಕುಶವಿರುವುದಿಲ್ಲ. ಅನುಭವದಿಂದ ಬರುವ ತಾಳ್ಮೆಯ ಬೆಂಬಲವಿರುವುದಿಲ್ಲ. ಇದಕ್ಕೆ ಪ್ರತಿಯಾಗಿ ಅವನಿಗೆ ಉತ್ಸಾಹ, ಶಬ್ದಸಂಗ್ರಹ, ಹೊಸದಾಗಿಯೇ ಓದಿಕೊಂಡ ಕೆಲವೊಂದು ವಿಷಯಸಂಗ್ರಹ ಇವುಗಳು ಇರುವುದುಂಟು. ಇಂತಹ ಬರೆಹಗಾರ ವಿಮರ್ಶಕನಲ್ಲ. ಒಬ್ಬ ಗ್ರಂಥಕರ್ತನು ಹೀಗೆಯೇ ಏಕೆ ಬರೆದ? ಮತ್ತೊಂದು ರೀತಿಯಲ್ಲಿ ಏಕೆ ಬರೆಯಲಿಲ್ಲ?—ಎಂಬುದು ಅವನಿಗೆ ತಿಳಿಯುವುದೂ ಇಲ್ಲ. ಆತನು ಆ ಮಾತನ್ನು ಲಕ್ಷಿಸುವುದೂ ಇಲ್ಲ. ನ್ಯಾಯಸಮ್ಮತವಾಗಿ ಬರೆಯಬೇಕೆಂದು ಆತನು ಅಪೇಕ್ಷಿಸುವುದೂ ಇಲ್ಲ.

ಇನ್ನು ಹಿರಿಯರ ಗುಂಪಿಗೆ ಸೇರುವ ವಿಮರ್ಶಕನ ವಿಚಾರ. ಬಹುಸಂಖ್ಯೆಯಲ್ಲಿ ಬರುತ್ತಿರುವ ಹೊಸ ಪುಸ್ತಕಗಳ ಬಗೆಗೆ ಅವನ ದೃಷ್ಟಿ ಹೇಗಿರಬೇಕು? ಕೆಲವೊಂದು ಪುಸ್ತಕಗಳು ಮಾತ್ರ ಪ್ರಶಂಸೆಗೆ ಯೋಗ್ಯವೆಂದಿಟ್ಟುಕೊಳ್ಳಬೇಕೇ? ಇಲ್ಲವೆ ಹಲವಾರು ಬಗೆಯ ಗ್ರಂಥಗಳು ಪ್ರಶಂಸೆಗೆ ಪಾತ್ರವಾಗಬಹುದೆಂದೂ ಆದರೆ ಕೆಲವೊಂದು ಗ್ರಂಥಗಳಲ್ಲಿ ವಿಶಿಷ್ಟ ದೋಷಗಳಿವೆಯೆಂದೂ ವಿಚಾರಿಸಬಹುದಲ್ಲವೇ? ಇದರಲ್ಲಿ ಎರಡನೆಯ ರೀತಿಯೇ ಉಚಿತವಾದುದು. ಹಾಗಾದರೆ ಗ್ರಂಥಗಳ ಯೋಗ್ಯತೆ ನಿರ್ಣಯಿಸುವ ಒರೆಗಲ್ಲು ಯಾವ ಬಗೆಯದಿರಬೇಕು? 'ಈ ಜೀವನಚರಿತ್ರೆ ದೀರ್ಘವಾಗಿದೆ. ಆದ್ದರಿಂದ ಅದು ಚೆನ್ನಾಗಿಲ್ಲ. ಈ ಇತಿಹಾಸಗ್ರಂಥ ಇದುವರೆಗೆ ನಿರಂಕುಶನೆಂದು ಬಣ್ಣಿಸಲ್ಪಟ್ಟ ವ್ಯಕ್ತಿಯ ಪ್ರಶಂಸೆಗೆ ಹೊರಟಿದೆ. ಕಾರಣ ಇದು ಸರಿಯಲ್ಲ. ಈ ಕವಿತೆ ಮಿಲ್ಟನ್, ಷೇಕ್ಸಪೀಯರ್‌ರ ಕವಿತೆಗಳಂತೆ ಒಳ್ಳೆಯದಾಗಿಲ್ಲ. ಕಾರಣ ಇದು ವಿಕ್ಷಿಪ್ತವಾದುದು. ಇದು ಆಧುನಿಕ ಕೃತಿ. ಅಂತೆಯೇ ಇದು ಬಹಳ ಉತ್ತಮವಾಗಿದೆ. ಈ ಕೃತಿಯು ಸಾಮಾಜಿಕ ವಿಮರ್ಶೆಯನ್ನು ಕೊಡುತ್ತಿದೆ. ಆದುದರಿಂದ ಇದು ಅದ್ವಿತೀಯ'—ಹೀಗೆಲ್ಲ ಗ್ರಂಥವಿಮರ್ಶೆ ಮಾಡುತ್ತಾ ಹೊರಡ

ಬೇಕೇ ? ಹೀಗೆ ಮಾಡುವುದು ಸರಿಯಾಗಲಾರದು. ಸ್ಟೆಂಟ್ ಬೆವ್ವೆ,' ವಿಮರ್ಶಕ ಪಕ್ಷಪಾತಿಯಾಗಿರಬಾರದು ; ಯಾವ ಪಕ್ಷವನ್ನೂ ಎತ್ತಿಹಿಡಿಯಕೂಡದು' ಎಂದು ಹೇಳಿದ. ಈ ಹೇಳಿಕೆ ಸಮಂಜಸವಾದುದು. ಈ ಹೇಳಿಕೆಯನ್ನು ಉಲ್ಲೇಖಿಸುವಾಗ 'ಪುಸ್ತಕಾವಲೋಕನಕಾರ', 'ವಿಮರ್ಶಕ' ಎಂಬ ಪದಗಳಲ್ಲಿಯ ವ್ಯತ್ಯಾಸವನ್ನು ಗಮನಿಸಿಲ್ಲ.

ಒಳ್ಳೆಯ ವಿಮರ್ಶಕ ಯಾವ ಪೂರ್ವಗ್ರಹವೂ ಇಲ್ಲದ ಮನಸ್ಸಿನಿಂದ ಪ್ರತ್ಯೇಕ ಗ್ರಂಥವನ್ನು ಅದರದರ ಯೋಗ್ಯತೆಯ ಮೇರೆಗೆ ಬೆಲೆ ಕಟ್ಟಲು ತೊಡಗಬೇಕು. ಈ ಸಂದರ್ಭದಲ್ಲಿ ಕೆಳಗೆ ಸೂಚಿಸಿದ ಹಾದಿಯನ್ನು ಹಿಡಿಯಬೇಕಾಗುತ್ತಿದೆ :

೧. ಪುಸ್ತಕವು ಗ್ರಂಥಕರ್ತನ ಯೋಜನೆಗನುಗುಣವಾಗಿದೆಯೇ ?

೨. ಆ ಯೋಜನೆ ಒಳ್ಳೆಯದೇ ?

೩. ಆ ಪುಸ್ತಕದಲ್ಲಿ ಒಳ್ಳೆಯ ಶೈಲಿ ಇದೆಯೇ ? ಅಂದರೆ ಒಳ್ಳೆಯ ತಿಳಿವಳಿಕೆ, ಜ್ಞಾನ, ಭಾವನೆಗಳನ್ನು ಹೊರಹೊಮ್ಮಿಸುವ ರೀತಿಯಲ್ಲಿ ಶೈಲಿ ಇದೆಯೇ ?

೪. ಈ ಪುಸ್ತಕವನ್ನು ಒಬ್ಬ ವಿಶಿಷ್ಟ ಶೈಲಿಯ ಗ್ರಂಥಕರ್ತನು ಮಾತ್ರ ಬರೆಯಬಲ್ಲನೇ ? (ಗ್ರಂಥಕರ್ತನ ಬಗೆಗಿರುವ ಗ್ರಂಥದ 'ಬೇಕು-ಬೇಡ'ವಾಗಲಿ, ಗ್ರಂಥದ ಸರಣಿ, ದೃಷ್ಟಿಗಳ ಬಗೆಗಿರುವ ಭಿನ್ನಾಭಿಪ್ರಾಯವಾಗಲಿ, ಇಲ್ಲಿ ಅಡ್ಡಬರಬೇಕಾಗಿಲ್ಲ)— ಇಂತಹ ಪ್ರಶ್ನೆಗಳಿಗೆ ಮೊದಲು ಸ್ಥೂಲವಾಗಿಯಾದರೂ ಉತ್ತರಗಳನ್ನು ಪಡೆದುಕೊಳ್ಳಬೇಕು. ಅನಂತರ ಪುಸ್ತಕದ ಯೋಗ್ಯತೆಯನ್ನು ನಿರ್ಣಯಿಸಲು ಹೊರಡಬೇಕು. ಆಗ ಗ್ರಂಥದ, ಗ್ರಂಥಕರ್ತನ ದೃಷ್ಟಿಯನ್ನು ಗ್ರಹಿಸಿಕೊಳ್ಳುವುದು ಆವಶ್ಯಕವಾಗಿ ಬೇಕಾಗುತ್ತಿದೆ. ಅರ್ಥಾತ್ ವಿಮರ್ಶಕ ತನ್ನ ಅಪನಂಬಿಕೆಯನ್ನು ಬದಿಗಿಟ್ಟು, ಗ್ರಂಥವನ್ನು ಬಿಚ್ಚುಮನದಿಂದ ಓದಲು ಆರಂಭಿಸಬೇಕು. ಗ್ರಂಥದ ವಾಚನವು ತನ್ನ ಕಲ್ಪನಾಶಕ್ತಿಯ ಮೇಲೆ ಎಂತಹ ಪರಿಣಾಮ ಮಾಡುವುದೆಂಬುದನ್ನು ನಿರ್ಧರಿಸಬೇಕು. ಇಲ್ಲಿ ವಿಮರ್ಶಕನ ಸಂಸ್ಕೃತಿ, ಮನದ ಆವರಣ ಇವು ಮುಖ್ಯವಲ್ಲ. ವಿಮರ್ಶಕ ವಾದರಂಗಕ್ಕೆ ಇಳಿಯಬಾರದು ; ಯೋಗ್ಯತೆ ನಿರ್ಣಯಿಸಲು ಮಾತ್ರ ತೊಡಗ

ಬೇಕು. ಹಾಗೆ ಮಾಡಹೊರಟಿರುವಾಗ ತಾನು ಪುಸ್ತಕ ಓದುತ್ತಿರುವ ಸಮಯ ದಲ್ಲೆಲ್ಲ ತನ್ನ ಲಕ್ಷ್ಯವನ್ನು ಪೂರ್ತಿಯಾಗಿ ತಾನು ಓದುತ್ತಿರುವ ಪುಸ್ತಕದ ಕಡೆಗೇ ಇರಿಸಬೇಕು. ಉಳಿದಾವ ವಿಚಾರಗಳಿಗೂ ಅವಕಾಶವಿರಬಾರದು. ಇದು ಬಹು ಮುಖ್ಯವಾದ ಮಾತಾಗಿದೆ.

ಪುಸ್ತಕಾವಲೋಕನಕಾರನು ಗ್ರಂಥಕರ್ತನ ಹೆಸರನ್ನು ನೋಡಿಕೊಂಡು ಪುಸ್ತಕದ ಆರಂಭದಲ್ಲಿಯ ಕೆಲವು ಮಾತುಗಳನ್ನು ಅವಲೋಕಿಸಿ ಅಲ್ಲಲ್ಲಿ ಕೆಲವು ಭಾಗ ಓದಿಕೊಂಡು ತನ್ನ ಕಲ್ಪನೆಯನ್ನೇ ಅದರಲ್ಲಿ ಕಂಡುಕೊಂಡು ವಿಮರ್ಶೆಗೆ ತೊಡಗುವುದುಂಟು. ಹೀಗೆ ಮಾಡಿದರೆ ಪುಸ್ತಕವನ್ನು ಓದಿದಂತೆ ಆಗುವುದಿಲ್ಲ. ತನ್ನ ಗುಂಪು, ಸಂಪಾದಕ, ತಾನು ಉದ್ದೇಶಿಸಿರುವ ಕೆಲವೊಂದು ಓದುಗರು ಇವರನ್ನು ಮಾತ್ರ ತನ್ನ ಮನದೆದುರು ಇಟ್ಟುಕೊಂಡು ಹೊರಡುವ ಪ್ರವೃತ್ತಿ ಇಲ್ಲಿದೆ. ತನ್ನ ಜಾಣ್ಮೆಯ ತಿರುವು-ಮುರುವು, ಓದುಗರ ವಿನೋದ ಇವುಗಳನ್ನೇ ಲಕ್ಷಿಸಿ ವಿಮರ್ಶೆ ಬರೆಯುವುದು ಸರಿಯಲ್ಲ. ಇಂತಹ ಹಾದಿಯಿಂದ ಹೊರಟ ವಿಮರ್ಶಕನನ್ನು ಬೇಟೆಗಾರನೆನ್ನಬಹುದು. ತಾನು ಗುರಿಯಿಟ್ಟ ಪ್ರಾಣಿಯನ್ನು ಕೆಡಹುವುದು ಬೇಟೆಗಾರನ ರೀತಿಯಾಗಿದೆ; ವಿಮರ್ಶಕನದಲ್ಲ. ಹೀಗೆ ಮಾಡುವಲ್ಲಿ ಹೆಮ್ಮೆಯ ಅಂಶವೇ ಹೆಚ್ಚಾಗಿ ಇರುತ್ತದೆ. ಗ್ರಂಥಕರ್ತನ ಬಗೆ ಗಿರುವ ತನ್ನ ಕರ್ತವ್ಯವನ್ನು ವಿಮರ್ಶಕ ಮರೆತರೆ ಎಲ್ಲವೂ ವ್ಯರ್ಥ.

ಓದುಗರಿಗೆ ವಿನೋದವನ್ನೊದಗಿಸಿದರೆ, ತನ್ನ ದ್ವೇಷವನ್ನು ಮೆರೆಸಿದರೆ ವಿಮರ್ಶೆಯಾಗುವುದಿಲ್ಲ. ಗ್ರಂಥಕರ್ತನ ಮನೋಭೂಮಿಕೆಯನ್ನು ಅರಿತು ಕೊಳ್ಳುವುದೆಂದರೆ ತನ್ನ ನಿರ್ಣಯಗಳನ್ನು ಬಿಟ್ಟುಕೊಡಬೇಕೆಂದು ಅರ್ಥ ವಾಗುವುದಿಲ್ಲ. ಕೆಲಕಾಲ ಅದನ್ನು ತಡೆಹಿಡಿಯಬೇಕೆಂದಿಷ್ಟೇ ಅಭಿಪ್ರಾಯ. ಮೊದಲೇ ತನಗೆ ಬೇಕಾದ ಸಿದ್ಧಾಂತ ಮಾಡಿಕೊಂಡು ಹೊರಡುವ ಲಘು ಪ್ರವೃತ್ತಿಯ ವಿಮರ್ಶಕನು ಅಚ್ಚಿನ ದೋಷಗಳನ್ನು, ನೀರಸ ಭಾಗಗಳನ್ನು ಮಾತ್ರ ಗಮನಿಸಿ ಗ್ರಂಥಕರ್ತನ ಬುದ್ಧಿಗೆ ಅಪಮಾನವಾಗುವ ರೀತಿಯಲ್ಲಿ ವಿಮರ್ಶೆ ಬರೆಯಲು ತೊಡಗುತ್ತಾನೆ. ಆದರೆ ನಿಜವಾದ ವಿಮರ್ಶಕ ಪುಸ್ತಕದ ಎಲ್ಲ ಅಂಶಗಳನ್ನೂ ಗಮನಿಸಬೇಕಾಗುತ್ತದೆ. ಆತನು ಪುಸ್ತಕದ ಓದು ಮುಗಿ ಯುವವರೆಗೆ ತನ್ನ ನಿರ್ಣಯಗಳನ್ನು ತಡೆದು ಹಿಡಿಯುತ್ತಾನೆ. ಅಚ್ಚಿನ ದೋಷ, ಬೇಸರದ ಭಾಗ ಇವುಗಳ ಸ್ಥಾನವನ್ನು ಸರಿಯಾಗಿ ಗುರುತಿಸುತ್ತಾನೆ.

ಪ್ರಮಾಣದ ಅರಿವು ಒಳ್ಳೆಯ ವಿಮರ್ಶಕನ ಆವಶ್ಯಕ ಗುಣ. ತನ್ನದೆಂದು ತಿಳಿದುಕೊಂಡ ಸಂಸ್ಕೃತಿಗಿಂತ ಭಿನ್ನವಾದ ಸಂಸ್ಕೃತಿಯ ಗ್ರಂಥಕರ್ತನಿಂದಲೂ ಒಳ್ಳೆಯ ಗ್ರಂಥ ರಚಿತವಾಗಬಹುದೆಂಬುದನ್ನು ಆತನು ಅಲಕ್ಷಿಸುವುದಿಲ್ಲ. 'ರೆವ್ಯೂ' ಇದು 'ಕ್ರಿಟಿಸಿಸಮ್' ಆಗಬೇಕಾದರೆ ವಿಮರ್ಶಕನು ಗ್ರಂಥದ ಹಿಂದಿರುವ ಗ್ರಂಥಕರ್ತನ ಮನೋಧರ್ಮವನ್ನು ಗ್ರಹಿಸಬೇಕು. ಅವಸರದಲ್ಲಿ ಮನಬಂದಂತೆ ಬರೆಯಲು ಹೊರಡಬಾರದು. ವಿಮರ್ಶಕನು ಹೊಸದನ್ನು ಕಲಿಯಲು, ಮೆಚ್ಚಲು ಸಮರ್ಥನಾಗಿರಬೇಕು. ಓದುವಾಗ ಸರಿಯಲ್ಲವೆಂದು ತೋರುವ ಅಂಶವನ್ನು ಕುರಿತು ತನ್ನ ನಿರ್ಣಯವನ್ನು ಪುಸ್ತಕದ ಓದು ಮುಗಿಯುವವರೆಗೂ ವ್ಯಕ್ತಗೊಳಿಸಲು ಹೊರಡಬಾರದು. ಗ್ರಂಥದಲ್ಲಿ ತಿರುಳು, ಬೆಳಕು ಇದ್ದಿರಬಹುದೇ ಎಂಬ ಅನ್ವೇಷಣೆಯನ್ನೇ ಆತ ನಡೆಯಿಸಬೇಕು. ಅದು ದೊರೆತರೆ ಅದನ್ನು ನಿರೂಪಿಸಬೇಕು. ಇಲ್ಲವೆಂದು ತೋರಿದರೆ ಹಾಗೂ ಹೇಳಬಹುದು.

ವಿಮರ್ಶಕನಿಗೆ ಗ್ರಂಥಕರ್ತನ ಹಾಗೂ ಓದುಗರ ಸಮಾಜದ ಬಗೆಗೆ ಹೊಣೆಯಿದೆ. ಭವಿಷ್ಯ ಜನಾಂಗಕ್ಕಿಂತ ತನ್ನ ಸಮಕಾಲೀನ ಸಮಾಜದ ಬಗೆಗಿರುವ ಆತನ ಹೊಣೆ ಹೆಚ್ಚಿನದು. ಸಮಕಾಲೀನ ಓದುಗರು ವಿಮರ್ಶಕನಿಂದ ಹೊಸ ಪುಸ್ತಕದ ವಿಷಯವೇನು? ಆ ಪುಸ್ತಕ ತಾವು ಓದಲರ್ಹವಾದುದೇ? ಎಂಬುದನ್ನು ಅರಿತುಕೊಳ್ಳಲು ಅಪೇಕ್ಷಿಸುತ್ತಾರೆ. ಅರ್ಥಾತ್ ಅವಲೋಕನಕಾರನೂ ಒಬ್ಬ ಓದುಗನಾಗಿ ಯಾವ ಅಭಿಪ್ರಾಯವನ್ನು ಹೇಳುತ್ತಾನೆಂಬುದನ್ನು ಅವರು ನಿರೀಕ್ಷಿಸುತ್ತಾರೆ. ಆದುದರಿಂದ ಅವಲೋಕನಕಾರನು ಗ್ರಂಥಕರ್ತನಿಗೆ ಮಾತ್ರವಲ್ಲದೆ ಓದುಗರಿಗೂ ನ್ಯಾಯವನ್ನು ನೀಡಬೇಕಾಗುತ್ತದೆ. ಕಲ್ಪನಾ ಶಕ್ತಿಯಿರುವ ಅವಲೋಕನಕಾರ ತನಗಾದ ಸಂವೇದನೆಯನ್ನು ಓದುಗರಿಗೆ ನಿರೂಪಿಸುತ್ತಾನೆ. ಅಲ್ಲದೆ ಪುಸ್ತಕದ ಗಾತ್ರ ಯೋಗ್ಯತೆಗಳು ತನಗೆ ಸಂತೋಷವನ್ನೀಯುವ ಕಾರ್ಯದಲ್ಲಿ ಪಡೆಯಬಹುದಾದ ಯಶಸ್ಸನ್ನು ಕುರಿತೂ ಹೇಳುತ್ತಾನೆ. ವಿಮರ್ಶಕನೆಂದರೆ ಗ್ರಂಥದ ಅರ್ಥವನ್ನು ನಿರೂಪಿಸುವವ.

ವಿಮರ್ಶಕ ತನ್ನ ಅಭಿಪ್ರಾಯವನ್ನು ಹತ್ತಿಕ್ಕಬೇಕಾಗಿಲ್ಲ. ಪುಸ್ತಕದ ಬಗೆಗೆ ನ್ಯಾಯವನ್ನೀಯುವ ಕಾರ್ಯಮಾಡಿ ತನ್ನ ಬುದ್ಧಿಮತ್ತೆಯಿಂದ ಪುಸ್ತಕವನ್ನು 'ಕೊಲ್ಲ'ಬಹುದು. ಆದರೆ ವಿಮರ್ಶೆಗೆ ಬುದ್ಧಿಮತ್ತೆಯೊಂದೇ ಸಾಲದು.

ಅದರೊಂದಿಗೆ ಕಲ್ಪಕತೆಯೂ ಬೇಕು. ಈ ಗುಣವು ಬುದ್ಧಿಮತ್ತೆಯುಳ್ಳವರಲ್ಲಿ ಕಡಮೆಯಾಗಿರುವುದುಂಟು. ವಿನೋದಪ್ರವೃತ್ತಿ, ಅನಾಸಕ್ತಿ, ಸಹನಶೀಲತೆ, ಗ್ರಂಥದ ಬಗೆಗೆ ಮತ್ತು ಜನರ ಬಗೆಗೆ ಅನುಭವ ಇವೆಲ್ಲ ವಿಮರ್ಶಕನಿಗೆ ಬೇಕು. ಸೇಡಿನ ಬುದ್ಧಿಯು ವಿಮರ್ಶೆ ಹೊಲ್ಲದ ಕೆಲಸ. ಭಾವನಾಪರವಶತೆಯೂ ಸಲ್ಲದು. ಕೇವಲ ಹಣಕ್ಕಾಗಿ ಬರೆಯುವವನ ಹರಕು-ಮುರುಕು ಕಷ್ಟದ ಹೋರೆಯು 'ಒರಿಜಿನಾಲಿಟಿ'ಯ ಕೃತಿಗೆ ಸರಿಯಾಗಲಾರದು. ಹೊಣೆಗೆಟ್ಟ ವಿಮರ್ಶೆಯು ಮರೆಯಲ್ಲಿ ನಿಂತು ಚಿವುಟುವ ಕೆಲಸವಿದ್ದಂತೆ. ಅದರಿಂದ ತಾನು ತಿರಸ್ಕರಿಸುತ್ತಿರುವ ಪಾಪವನ್ನೇ ತಾನು ಅನುಸರಿಸಿದಂತಾಗುತ್ತಿದೆಯಲ್ಲದೆ ಸಮತೋಲವನ್ನು ಸಾಧಿಸಿದಂತಾಗುವುದಿಲ್ಲ.

ನಿಷ್ಠುರವಾದರೂ ಸ್ವೀಕರಿಸಲರ್ಹವಾದ ಸ್ಪಷ್ಟೋಕ್ತಿ, ಯೋಗ್ಯತಾ ನಿರ್ಣಯ, ಸಹಾನುಭೂತಿ, ಪಾಂಡಿತ್ಯದ ಈರ್ಷೆಯನ್ನು ಬಿಟ್ಟುಕೊಡುವುದು —ಈ ಗುಣಗಳಿಂದ ಕೂಡಿದ ವಿಮರ್ಶೆಯು ಭವಿಷ್ಯಕ್ಕಾಗಿ ನಾವಿನ್ನೂ ಕಾಯಬೇಕಾಗಿದೆಯೆಂದು ತೋರುತ್ತಿದೆ.

---

# ಓದುಗನಾಗಿ :

ಪುಸ್ತಕ ಪ್ರಪಂಚಕ್ಕೆ ಸಂಬಂಧಪಟ್ಟ ಉದ್ಬೋಧಕ ವಿಚಾರಗಳನ್ನು ಈ ಮೊದಲು ಸಂಗ್ರಹಿಸಲಾಗಿದೆ. ಪುಸ್ತಕವಿಮರ್ಶೆಯನ್ನು ಕುರಿತ ಅಲ್ಲಿಯ ವಿಚಾರಪ್ರಣಾಲಿಯು ಅರ್ಥಪೂರ್ಣವಾಗಿದೆಯೆಂದು ನಾನು ಭಾವಿಸಿದ್ದೇನೆ. ಅಲ್ಲದೆ ಇಂದಿನ ಕನ್ನಡ ಸಾಹಿತ್ಯವಿಮರ್ಶೆಗೆ ಆ ವಿಚಾರಪ್ರಣಾಲಿಯನ್ನು ಅನ್ವಯಿಸಿನೋಡುವುದು ಬಹಳ ಪ್ರಯೋಜನಕಾರಿಯೂ ಆಗಬಲ್ಲದು. ಸಾಹಿತ್ಯವಿಮರ್ಶೆಯ ಬಗೆಗೆ ಉಚಿತ ಮಾರ್ಗದರ್ಶನಮಾಡುವ ಈ ವಿಚಾರಗಳಲ್ಲಿ ಬಂದಿರುವ ಸಂದೇಶ, ವಿವೇಕ, ಜಾಗರೂಕತೆಗಳನ್ನು ಕನ್ನಡದ ವಿಮರ್ಶಕರು ಅನುಸರಿಸಬೇಕಾದ ಅವಶ್ಯಕತೆಯೂ ಇದೆಯೆಂದು ನನಗೆ ತೋರುತ್ತಿದೆ. 'ಅವಲೋಕನಕಾರ,' 'ವಿಮರ್ಶಕ' ಎಂಬ ಪದಗಳ ತಾರತಮ್ಯವನ್ನೂ ನಾವು ಹೆಚ್ಚಾಗಿ ಗಮನಿಸಬೇಕಾಗಿದೆ. 'ತಾತ್ಪೂರ್ತಿಕವಾಗಿ ಬೆಲೆ ಕಟ್ಟುವ ಹವ್ಯಾಸ; 'ಬೇಕು–ಬೇಡ'ಗಳ ಪ್ರಭಾವ; ಇತರ ಲೇಖಕರ ಬಗೆಗೆ ಅನಾದರ ಇಲ್ಲವೆ ಸಹಾನುಭೂತಿಯ ಅಭಾವ; ಚಿಲ್ಲರೆ ಸಂಗತಿಗಳನ್ನೇ ಎತ್ತಿಕೊಳ್ಳುವದು; ಕೃತಿಗಿಂತ ಹೆಚ್ಚಾಗಿ ಕೃತಿಕಾರನನ್ನೇ ವೈಯಕ್ತಿಕವಾಗಿ ಗಮನಿಸುವುದು'— ಇತ್ಯಾದಿ ಅಂಶಗಳನ್ನುಳಿದು ಸಾಹಿತ್ಯವಿಮರ್ಶೆ ಪರಿಶುದ್ಧವೂ ಮೌಲಿಕವೂ ಆಗಬೇಕಾಗಿದೆ. ವಿಮರ್ಶಕನಲ್ಲಿರಬೇಕಾದ

ಶ್ರೇಷ್ಠಗುಣಗಳನ್ನು ಅಳವಡಿಸಿಕೊಳ್ಳಬೇಕಾಗಿದೆ. ಕನ್ನಡದಲ್ಲಿ ಇದುವರೆಗೆ ಬಂದಿರುವ ವಿಮರ್ಶೆಯಲ್ಲಿ ಶ್ರೇಷ್ಠ ಗುಣಗಳ ಅಭಾವ ಆಗಾಗ ತಲೆದೋರಿರುವುದುಂಟು. 'ಅವಲೋಕನಕಾರ'ನ ಚಿತ್ತಲಹರಿಯು ಸುಳಿದಾಡಿದುದೂ ಉಂಟು. ಹಾಗಾಗದಂತೆ ಫ್ರ್ಯಾಂಕ್ ಸಿನ್‌ರಟನ್‌ಟನ್‌ರ ವಿಚಾರ ಪ್ರಣಾಲಿಯು ನೆರವಾಗಬಲ್ಲದು. ಆ ವಿಚಾರಪ್ರಣಾಲಿಗನುಗುಣವಾಗಿ ಕನ್ನಡ ಸಾಹಿತ್ಯದಲ್ಲಿ ವಿಮರ್ಶೆ ನಡೆದಿದೆಯೇ, ಎಂಬುದನ್ನು ಪರಿಕಿಸುವ ಕಾರ್ಯ ನಡೆಯಬೇಕಾಗಿದೆ.

ಇಲ್ಲಿ ನಾನು ನನ್ನವೇ ಆದ ಕೆಲವು ವಿಮರ್ಶೆಗಳನ್ನು ಪರೀಕ್ಷೆಗೆಂದು ಒಡ್ಡಬೇಕೆಂದಿದ್ದೇನೆ. ೧೯೩೬ರಿಂದ ೧೯೪೬ರ ಅವಧಿಯಲ್ಲಿ ನಾನು ಬರೆದ ಪುಸ್ತಕವಿಮರ್ಶೆ, ಪರಿಚಯಗಳಲ್ಲಿ ಕೆಲವನ್ನು ಆರಿಸಿಕೊಂಡು ಓದುಗರ ಮುಂದಿಡುತ್ತಿದ್ದೇನೆ. ವಿಮರ್ಶೆಗಳನ್ನು ಬರೆಯುವ ಕಾಲದ ನನ್ನ ಮನೋಭಾವ ಈಗ ಮಾರ್ಪಟ್ಟಿರುವುದೂ ಸಾಧ್ಯವಿದೆ. ಹೀಗಿದ್ದೂ ನಾನು ಅವುಗಳನ್ನು ಇಲ್ಲಿ ಆರಿಸಿಕೊಂಡಿರುವೆ. ವಿಮರ್ಶಕನಾಗಿ ನಾನೇ ಬರೆದ ಮಾತು ರೀತಿಗಳನ್ನು ಹೇಗೆ ಮಾರ್ಪಡಿಸಿಕೊಳ್ಳಬೇಕೆಂಬುದು ನನಗೆ ದೊರೆಯುವ ಪ್ರಯೋಜನದ ಮಾತಾಗಿದೆ. ನಾನು ಮೆಚ್ಚಿಕೊಂಡ ಕೆಲವು ಕೃತಿಗಳ ಪರಿಚಯವನ್ನು ಈ ಮೂಲಕ ಒದಗಿಸಿಕೊಡಲೂ ಸಾಧ್ಯವಾಗುತ್ತಿದೆ. ನಾನೊಬ್ಬ ಓದುಗನಾಗಿ ಕೆಲವು ಕನ್ನಡ ಪುಸ್ತಕಗಳ ಬಗೆಗೆ ೧೦–೨೦ ವರುಷಗಳ ಹಿಂದೆ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನಿಲ್ಲಿ ಓದುಗರ ಮುಂದಿಡುತ್ತಿದ್ದೇನೆ. ಈ ವಿಮರ್ಶೆಗಳನ್ನು ಅಂದುಬರೆದ ರೀತಿಯಲ್ಲಿಯೇ ಒಂದೆರಡು ಪದಪ್ರಯೋಗಗಳನ್ನು ತೀರ ಅಲ್ಪ ಪ್ರಮಾಣದಲ್ಲಿ 'ಕೈಯಾಡಿಸಿ'—ಕೊಡುತ್ತಿದ್ದೇನೆ. ಕೆಲವು ಕನ್ನಡ ಕೃತಿಗಳನ್ನು ಕುರಿತ ಒಬ್ಬ ಓದುಗನ ಪ್ರತಿಕ್ರಿಯೆಗಳಿವೆಂಬ ದೃಷ್ಟಿಯಿಂದ ಇತರ ಓದುಗರು ಇವನ್ನು ಗಮನಿಸಬೇಕಾಗಿದೆ. ಈ ಮೊದಲೇ ಸಂಗ್ರಹಿಸಿದ ವಿಮರ್ಶೆಯ ತತ್ತ್ವ ಇಲ್ಲವೆ ಅದರ ಅಭಾವ ಮತ್ತು 'ಅವಲೋಕನಕಾರ'ನ ಲಹರಿ ಇಲ್ಲಿ ಹೇಗೆ ಮೂಡಿದೆಯೆಂಬುದನ್ನು ಗುರುತಿಸಲೂ ಸಾಧ್ಯವಿದೆ.

ಕಾಲಾನುಕ್ರಮವನ್ನು ಅನುಸರಿಸಿ **೧೯೩೬–೧೯೪೬ರ** ಅವಧಿಯ ವಿಮರ್ಶೆಗಳನ್ನು ಮುಂದೆ ಕೊಡಲಾಗಿದೆ:

## ೧. ಹಗಲುಗನಸುಗಳು (ಎ. ಎನ್. ಮೂರ್ತಿರಾಯರು)

ಈ ಪುಸ್ತಕದ ಹೆಸರನ್ನು ಓದಿದ ಕೂಡಲೆ ಇದೊಂದು ಮಾನಸ ಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕವೆಂದು ಕಲ್ಪನೆಯಾಗಬಹುದು. ಆದರೆ ಇದೊಂದು ಲಲಿತ ಸಾಹಿತ್ಯ ಗ್ರಂಥ. ಪುಸ್ತಕದ ಹೆಸರು ಇನ್ನಿಷ್ಟು ಲಲಿತವಾಗಬಹುದಿತ್ತೇನೋ. ಇಲ್ಲಿರುವವು ಪ್ರಬಂಧಗಳೆಂದು ಲೇಖಕರು ಹೇಳುತ್ತಾರೆ. ಆದರೆ ಅವುಗಳಲ್ಲಿ ಕೆಲವನ್ನು ಕಥನ ಪ್ರಬಂಧಗಳೆಂದೂ ಕರೆಯಬಹುದು! ೧೯೩೬ನೆಯ ಇಸವಿಯ ದೇವರಾಜ ಬಹಾದ್ದೂರ್ ಬಹುಮಾನವು ಈ ಪುಸ್ತಕಕ್ಕೆ ದೊರಕಿತ್ತು. ಆದರೆ ಆ ಒಂದು ಸಂಗತಿಯಿಂದಲೇ ಈ ಪುಸ್ತಕದ ಗುಣದ ವಿಷಯವಾಗಿ ಪೂರ್ವಗ್ರಹವನ್ನಿಟ್ಟುಕೊಳ್ಳುವುದೂ ಸರಿಯಾಗಲಿಕ್ಕಿಲ್ಲ. ಈ ಸಂಗ್ರಹದಲ್ಲಿ ಒಟ್ಟು ಏಳು ಪ್ರಬಂಧಗಳೂ ಕಥನ ಪ್ರಬಂಧಗಳೂ ಇವೆ. ಏಳಕ್ಕೂ ಒಂದು ಸಾಮಾನ್ಯ ಸ್ವರೂಪವನ್ನು ಸೂಚಿಸುವುದು ಸುಲಭವಲ್ಲ. ‘ಹಗಲುಗನಸುಗಳು’, ಹೂವುಗಳು’, ‘ಗಾಡಿಯ ಪ್ರಯಾಣ’ ಇವು ಮೂರನ್ನು ಭಾವನಾಲಹರಿಯುಳ್ಳ ಪ್ರಬಂಧಗಳೆಂದು ಹೇಳಬಹುದು. ‘ಗೌರಜ್ಜಿ’, ‘ಕುರುಡು’, ‘ಲಲಿತೆಯ ವಿದ್ಯಾಭ್ಯಾಸ,’ ‘ಪ್ರಣಯ ಯಾತ್ರೆ’ ಇವುಗಳನ್ನು ಕಥನಪ್ರಬಂಧ (narrative sketches) ಗಳೆಂದು ಕರೆಯಬಹುದು. ‘ಗೌರಜ್ಜಿ’ ಎಂಬುದು ಒಂದು ವ್ಯಕ್ತಿಯ ಭಾವನಾತ್ಮಕ ವೃತ್ತಾಂತವಾಗಿದೆ. ‘ಕುರುಡ’ ಎಂಬುದರಲ್ಲಿ ಒಂದು ಸನ್ನಿವೇಶದ ಚಿತ್ರವಿದ್ದು, ಪ್ರಚೋದಕ ವಿಚಾರ ಲಹರಿಯಿಂದ ಕೂಡಿದೆ. ಕೊನೆಯವೆರಡರಲ್ಲಿ ವ್ಯಕ್ತಿಗತ ಚಿತ್ರಗಳಿದ್ದು, ಆತ್ಮೀಯವೃತ್ತಾಂತಗಳನ್ನೊಳಗೊಂಡ ಕತೆಗಳಂತಿವೆ. ಅಂತೆಯೇ ಇಡಿಯ ಸಂಗ್ರಹವನ್ನು ಒಂದು ನಿರ್ದಿಷ್ಟ ಹೆಸರಿನಿಂದ ಕರೆಯಲಾರೆವು.

ಇನ್ನು ಈ ಪುಸ್ತಕವು ಕನ್ನಡಕ್ಕೆ ಹೊಸರೀತಿಯದೆಂದು ಒಪ್ಪಬೇಕು. ಸಣ್ಣಕತೆಗಳಿಗೂ ಪ್ರಬಂಧಗಳಿಗೂ ನಡುವೆ ಇರುವ ಭಾವನಾಚಿತ್ರಗಳ ಗುಂಪಿಗೆ ಸೇರಬಹುದಾದ ‘ರಾಮಾಚಾರಿಯ ನೆನಪು’ ಮುಂತಾದ ಪುಸ್ತಕಗಳು ಕನ್ನಡದಲ್ಲಿ ಬಂದಿರುವುದು ಒಂದೆರಡು ಮಾತ್ರ. ಪ್ರಸ್ತುತ ಸಂಗ್ರಹ

ದಲ್ಲಿರುವ ‘ ಹಗಲುಗನಸುಗಳು ’ ಮುಂತಾದ ಪ್ರಬಂಧಗಳು ಆಂಗ್ಲೇಯ ಪ್ರಬಂಧಗಳ ರೀತಿಯನ್ನು ಹೋಲುತ್ತಿದ್ದು, ರಾಬರ್ಟ್ ಲಿಂಡ್‌ನಂತಹ ಲೇಖಕರ ನೆನಪನ್ನು ತಂದುಕೊಡುತ್ತಿವೆ. ನಿರರ್ಗಳವಾಗಿ ಹರಿಯುವ ವಿಚಾರ ಲಹರಿ, ಆತ್ಮೀಯತೆಗಳು ಇಂತಹ ಪ್ರಬಂಧಗಳ ಗುಣಗಳು. ಈ ಪುಸ್ತಕದಲ್ಲಿ ಇನ್ನುಳಿದ ಕಥನಪ್ರಬಂಧಗಳಲ್ಲಿಯ ಕಥನರೀತಿ, ಆತ್ಮೀಯ ಶೈಲಿ ಇವು ಮನಸವನ್ನು ಸೆಳೆಯುತ್ತಿವೆ.

‘ ಗೌರಜ್ಜಿ ’ ಎಂಬುದು ಒಂದು ಕಥನಚಿತ್ರ. ಆದರಲ್ಲಿ ಗೌರಜ್ಜಿಯ ಪಾತ್ರವು ಸ್ಫುಟವಾಗಿ ಮೂಡಿದೆ. ಹಳೆಯ ಕಾಲದ ಅತ್ತೆಯ, ಯಜಮಾನತಿಯ ದರ್ಪ, ಸೊಸೆಯ ಕಾತರ ಸ್ಥಿತಿ, ಗೌರಜ್ಜಿ ಹೇಳುತ್ತಿದ್ದ ಹಾಸ್ಯದ ಕಥೆ, ಇಂದು ಲಕ್ಷಣವಾಗಿ ಸಭ್ಯರಂತೆ ಸರ್ಜ್‌ಸೂಟು ಹಾಕಿಕೊಂಡು, ಗಂಭೀರ ರೀತಿಯಿಂದ ವರ್ತಿಸುವ ಗೌರಜ್ಜಿಯ ಮಗನು ಬಾಲ್ಯದಲ್ಲಿ ನಡೆಸಿದ ಕಿಡಿಗೇಡಿತನ ಇವುಗಳು ಚೆನ್ನಾಗಿ ನಿರೂಪಿತವಾಗಿವೆ. ಗೌರಜ್ಜಿಗೆ ಚಿಕ್ಕಂದಿನಲ್ಲಿ ವೈಧವ್ಯವು ಪ್ರಾಪ್ತವಾಗಿದ್ದರೂ, ಮಕ್ಕಳಿಲ್ಲದಿದ್ದರೂ ಅವಳ ಹೃದಯವು ಕಲ್ಲಾಗಿರಲಿಲ್ಲ. ಅವರು “ ಒಮ್ಮೊಮ್ಮೆ ಮೋಕ್ಷವನ್ನು ಮರೆತು ದೇವರ ಪಕ್ಷವನ್ನು ಬಿಟ್ಟು ಹುಡುಗರ ಪಕ್ಷವನ್ನು ವಹಿಸುತ್ತಿದ್ದರೆ”ಂದು ಹೇಳಿರುವುದು ಸ್ವಾಭಾವಿಕವೂ ಸುಂದರವೂ ಆಗಿದೆ.

‘ ಹಗಲುಗನಸುಗಳು ’ ಎಂಬುದು ಒಂದು ರಮ್ಯ ಭಾವನಾಲಹರಿಯಾಗಿದೆ. ‘ಭಾವನಾಪ್ರಪಂಚದಲ್ಲಿ ಜೀವಿಸುವ ಮನೋಭಾವ’ ದಿಂದ ಚಿತ್ರಿಸಿದ ಪ್ರಬಂಧವಿದು. ವಾಸ್ತವ ಪ್ರಪಂಚದ ವೇಳಾಪಟ್ಟಿಯು ಯಾಂತ್ರಿಕವಾಗಿರುತ್ತದೆ. ಅಲ್ಲಿ ನೂತನ ಸಂಘಟನೆ, ಅದ್ಭುತ, ವಿಚಿತ್ರ ವ್ಯಾಪಾರಗಳು ಇರುವುದಿಲ್ಲ. ಆದುದರಿಂದಲೇ ಮನುಷ್ಯನು ಹಗಲುಗನಸುಗಳ ಭಾವನಾಪ್ರಪಂಚವನ್ನು ಅಪೇಕ್ಷಿಸಿ, ಅಲ್ಲಿ ವಿಹರಿಸಿ, ಆನಂದವನ್ನು ಪಡೆಯುತ್ತಾನೆ. ಲೇಖಕರು ಕನಸಿನ ವಿವಿಧ ಸನ್ನಿವೇಶಗಳನ್ನು ಕಾಂಡಪಟದಂತೆ ನಮ್ಮೆದುರು ತಂದು ನಿಲ್ಲಿಸುತ್ತಾರೆ. ಆ ಯಕ್ಷ ಪ್ರಪಂಚ (fairy-land) ವನ್ನು ಚಿಕ್ಕಂದಿನ ಭಾವನಾಮಯ ಜೀವನದಲ್ಲಿ ನಿರ್ಮಿಸಿಕೊಳ್ಳಲು ಸಾಧ್ಯವಿದೆ. ಪ್ರಬುದ್ಧವಾದ ವಾಸ್ತವ ಜೀವನದಲ್ಲಿ ‘‘ಎಲ್ಲಿ ನೋಡಿದರೂ ಅರಕೆ, ಅಪೂರ್ಣತೆ. ಕಾಡಿನ ಸೊಬಗಿನಲ್ಲಿ, ಬೈಲಿನ ವೈಶಾಲ್ಯದಲ್ಲಿ, ಪರ್ವತಮಾಲೆಯ

ಭೀಷಣ ಸೌಂದರ್ಯದಲ್ಲಿ, ಎಳೆಬಿಸಿಲಿನ ನಗೆಯಲ್ಲಿ ಮಾನವ ಹೃದಯದ ಪ್ರೇಮದಲ್ಲಿ—ಎಲ್ಲದರಲ್ಲಿಯೂ ಅಪೂರ್ಣತೆ " ಇದಕ್ಕೆ ಕಾರಣವೇನಂದರೆ " ಹಿಂದಿನಂತೆ ಭಾವನೆಯಲ್ಲಿ ಮುಳುಗಿ ಸುಲಭವಾಗಿ ತೃಪ್ತಿಹೊಂದುವ ಪ್ರಕೃತಿಯು ನಾಶವಾಗಿಹೋಯಿತು. " ಎಂಬ ಮಾತನ್ನು ಯಾರಾದರೂ ಒಪ್ಪಬಹುದು.

' ಹೂವುಗಳು ' ಎಂಬುದು ವಿವಿಧ ಹೂಗಳ ವರ್ಣನೆಯನ್ನೊಳಗೊಂಡಿದೆ. ಆ ವರ್ಣನೆಯಲ್ಲಿ ಭಾವನಾಲಹರಿಯು ತಾನೇ ತಾನಾಗಿ ಹರಿಯುತ್ತಿದೆ. ಕವಿಗಳಂತೆ ಈ ಲೇಖಕರೂ ' ಹೂವುಗಳು ಭೂದೇವಿಯ ಕವನಗಳೆ'ಂದು ಹೇಳಿ ಅವುಗಳಿಗೆ ಜನನ, ಮರಣ, ಸುಖದುಃಖದ ಅರಿವುಗಳನ್ನು ಆರೋಪಿಸಿದ್ದಾರೆ " ಹೂವುಗಳ ಜೀವನಕ್ಕೂ ಮನುಷ್ಯನ ಜೀವನಕ್ಕೂ ಸಾದೃಶ್ಯವಿದೆಯೆಂದೂ ನಮಗಿರುವ ಭಾವಾನುಭಾವಗಳು ಅವುಗಳಿಗೆ ಇರಬೇಕೆಂದೂ ಕೆಲವು ವೇಳೆ ತೋರಬಹುದು. " ಎಂದು ಅವರು ಹೇಳುವ ಮಾತಿನ ನಿದರ್ಶನವನ್ನು ಇಲ್ಲಿಯ ವಿವಿಧ ಹೂಗಳ ವರ್ಣನೆಯಿಂದ ಕಾಣಬಹುದು. ಕೊನೆಗೆ ಲೇಖಕರು ಹೇಳುವ " ಸುತ್ತಲೂ ಸೌಂದರ್ಯವೇ ನೋ ತುಂಬಿದೆ. ನೋಡಲು ಕಣ್ಣು ಬೇಕು. ಅನುಭವಿಸತಕ್ಕ ಮನೋಭಾವ ಬೇಕು. " ಎಂಬ ಮಾತು ಅರ್ಥಪೂರ್ಣವಾಗಿದೆ. ಸುಂದರ ವರ್ಣನೆ, ಭಾವ ಲಹರಿ ಇವುಗಳಿಂದ ಈ ಪ್ರಬಂಧವು ಶ್ರೇಷ್ಠ ಕೃತಿಯಾಗಿದೆ.

' ಗಾಡಿಯ ಪ್ರಯಾಣ 'ದಲ್ಲಿ ಹಿಂದಿನ ಕಾಲದ ಭಾವನಾತ್ಮಕ 'ರೋಮಾನ್ಸ' ಜೀವನವನ್ನು ಆಧುನಿಕ ಯುಗದ ಯಾಂತ್ರಿಕ ಜಗತ್ತಿನೊಡನೆ ಹೋಲಿಸಿ ನೋಡಿದ ಚಿತ್ರವಿದೆ. ಇಲ್ಲಿ ಲೇಖಕರು ಗಾಡಿಯ ಪ್ರಯಾಣದ ಸುಖ–ಸೊಬಗು-ಶಾಂತಿಗಳನ್ನು ಚಿತ್ರಿಸಿದ್ದಾರೆ. " ಈಗಿನ ಜೀವನವು ವಿಚಿತ್ರತರವಾದ ಆತುರದ ಜೀವನ....ಹಿಂದಿನ ಜೀವನದ ಸರಳತೆಯೂ ಏಕಮುಖತೆಯೂ ನಾಶವಾದಂತೆ ತೋರುತ್ತದೆ. ಈಗಿನ ಪ್ರಪಂಚದಲ್ಲಿ ವೇಗ ಹೆಚ್ಚು, ಸಂಪತ್ತು ಹೆಚ್ಚು. ಆದರೆ ಸೌಖ್ಯ ಹೆಚ್ಚೆಂದು ಹೇಳಲಾಗುವುದಿಲ್ಲ........ ಆ ಶಾಂತಿ, ಆ ವಿರಾಮ, ಸರಳ ಸಹವಾಸ, ಪ್ರಕೃತಿಯ ಗಮನದಂತೆ ನಿಧಾನವಾದ ಪ್ರಗತಿ ಇವು ನಮಗೆ ಸಂತೋಷದಾಯಕವಾಗಬಹುದು. " ಎಂಬುದೇ ಈ ಪ್ರಬಂಧದ ತಿರುಳು. ಇದರಲ್ಲಿ ವರ್ಣನೆಯು ಉದ್ದವಾಗಿ

ಬೆಳೆದು, ನಿರೂಪಣೆಯ ಏಕಸೂತ್ರತೆಯು ತಪ್ಪಿದಂತಿದೆ. ಹಾಸ್ಯವು ಇನ್ನೂ ಹೆಚ್ಚಾಗಿದ್ದಿದ್ದರೆ ವರ್ಣನೆಯು ಲಂಬಾಯಮಾನವೆಂದು ಅನಿಸುತ್ತಿರಲಿಲ್ಲ.

'ಕುರುಡ' ಎಂಬುದರಲ್ಲಿ ಭಿಕ್ಷುಕರ ದೀನ ಜೀವನವನ್ನು ಗಂಡಸಿನ ಹಾಗೂ ಹೆಂಗಸಿನ ಹೃದಯಗಳು ಯಾವ ದೃಷ್ಟಿಯಿಂದ ನೋಡಿ ಅನುಭವಿಸಿದವು ಎಂಬುದರ ಚಿತ್ರವಿದೆ. "ನನ್ನ ಮರುಕಕ್ಕೂ ಲಲಿತೆಯ ಮರುಕಕ್ಕೂ ಎಷ್ಟು ಭೇದ. ನನ್ನದು ದೂರದ ಮರುಕ.... ಲಲಿತೆಯ ಮರುಕವು.... ಆ ವೃದ್ಧೆಯನ್ನು ಸೇರಿತು. ಹೃದಯವು ಹೃದಯದೊಂದಿಗೆ ಬೆರೆಯಿತು." ಎಂಬ ಮುಖ್ಯ ಮಾತನ್ನು ಲೇಖಕರಿಗೆ ಹೇಳಬೇಕಾಗಿದೆ. ಆದರೆ ಈ ಕಥನ ಪ್ರಬಂಧವು ಸಪ್ಪೆಯಾದಂತಿದೆ. ಭಿಕ್ಷುಕರ ಹೃದಯದ್ರಾವಕ ಚಿತ್ರವಾಗಲಿ, ಪರಿಣಾಮಕಾರಕ ವಿಚಾರಲಹರಿಯಾಗಲಿ ಇಲ್ಲಿ ಕಂಡುಬರುವುದಿಲ್ಲ.

'ಲಲಿತೆಯ ವಿದ್ಯಾಭ್ಯಾಸ' ಎಂಬುದು ಪತಿಯು ಪತ್ನಿಗೆ ಪಾಠ ಹೇಳಲು ಪ್ರಯತ್ನಿಸಿದ ರಸಿಕ ಕಥಾನಕವಾಗಿದೆ. ಇದೊಂದು ಸಣ್ಣ ಕತೆಯೂ ಆಗಬಹುದು. ಪತಿಪತ್ನಿಯರು, ಉಪಾಧ್ಯಾಯ-ಶಿಷ್ಯೆ ಈ ಸಂಬಂಧದಲ್ಲಿ ಎಷ್ಟು ವಿಚಿತ್ರವಾಗಿ ತೋರಬಹುದು? ಎಂಬ ಸಮಸ್ಯೆಯನ್ನೂ ರಸಿಕತನದಿಂದ ಚರ್ಚಿಸಿದೆ. ಸರಸ ಹಾಸ್ಯ, ಸ್ವಾಭಾವಿಕ ಚಿತ್ರಗಳಿಂದ ಈ ಕಥೆಯು ಕೂಡಿದೆ. ಇದರಿಂದಲೂ ಮುಂದಿನ 'ಪ್ರಣಯಯಾತ್ರೆ' ಎಂಬ ಕಥೆಯಿಂದಲೂ ಲೇಖಕರ ರಸಿಕತನವನ್ನು ಚೆನ್ನಾಗಿ ಕಾಣಬಹುದಾಗಿದೆ. ಈ 'ಪ್ರಣಯಯಾತ್ರೆ' ನವದಂಪತಿಗಳ 'Honeymoon' ಆಗಿದೆ. "ಆದರೆ ನನಗೆ ಲಲಿತೆ ಗೃಹಿಣಿಯಾಗಿರುವುದಕ್ಕಿಂತಲೂ ಹೆಚ್ಚಾಗಿ ನನ್ನ ನಲ್ಲೆಯಾಗಿರಬೇಕೆಂದು ಇಷ್ಟ" ಎಂದು ಅಪೇಕ್ಷಿಸುವ ತರುಣನಿಗೆ ಚೆಲ್ಲಾಟದ ಹುಡಿಗೆಯು ಪತ್ನಿಯಾಗಿದ್ದಳು. ಲಲಿತೆ ಪತಿಯನ್ನು ಮುಂದಾಸನದಲ್ಲಿಟ್ಟು ಪೂಜಿಸುತ್ತಿರಲಿಲ್ಲ. ಅವನೊಡನೆ ಆಡುತ್ತಿದ್ದಳು. ಪತಿಯು ದೇವನಾಗಿರಬಹುದು, ಆದರೆ ಅವಳಿಗೆ ದೇವರಿಗಿಂತಲೂ ಹೆಚ್ಚಾಗಿ ಸಂಗಾತಿಯಾಗಿದ್ದನು. ಪಟ್ಟಣದ ಗಲಭೆಯುಳ್ಳ ಜೀವನದಿಂದ ಪ್ರಶಾಂತ ಹಳ್ಳಿಗೆ ಹೋಗಿ, ತರುಣ ಪತಿ-ಪತ್ನಿಯರು ಸ್ವಚ್ಛಂದವಾಗಿ ರಸಿಕಜೀವನವನ್ನು ಸಾಗಿಸಬೇಕೆಂದು ಪ್ರಯತ್ನಿಸಿದಾಗ— ಅಲ್ಲಿ ಒದಗಿದ ಅನಾನುಕೂಲತೆಗಳು,

ಪ್ರಣಯ ಕಲಹ, ಪರಸ್ಪರ ಚೇಷ್ಟೆ ಇವುಗಳಿಂದ ಆವರ ಅಭಿಲಾಷೆಗಳು ಅಪೂರ್ಣವಾಗಿ ಉಳಿದುದು– ಇವುಗಳ ಚಿತ್ರವು ಮನೋಹರವಾಗಿದೆ.

ಇಡಿಯ ಗ್ರಂಥವನ್ನು ಅವಲೋಕಿಸಿದ ಮೇಲೆ ಈ ಗ್ರಂಥದಲ್ಲಿ ಏಕ ಸೂತ್ರತೆ ಇಲ್ಲವೆಂದು ಎನಿಸದೆ ಇರಲಾರದು. ಕೆಲವು ಪ್ರಬಂಧಗಳೂ ಕೆಲವು ಕಥನಪ್ರಬಂಧಗಳೂ ಇಲ್ಲಿವೆ. ಸರಸ ಹಾಸ್ಯ, ಮನೋಹರ ಭಾವಲಹರಿ, ಆತ್ಮೀಯ ಶೈಲಿ ಇವುಗಳನ್ನು ನಾವು ಈ ಪುಸ್ತಕದಲ್ಲಿ ಕಾಣುತ್ತೇವೆ.

ಭಾಷೆಯು ಭಾವನಾತ್ಮಕ ಶೈಲಿಗೆ ಒಪ್ಪುವಂತಿದೆ. "ಅವಳು ನನ್ನ ಉತ್ಸಾಹದ ಮೇಲೆ ತಣ್ಣೀರೆರಚುತ್ತಲೇ ಇದ್ದಳು (ಪುಟ ೭೭)." ಎಂಬ ವಾಕ್ಯವು ಆಂಗ್ಲ ಭಾಷಾ ಪ್ರಯೋಗದ ಪ್ರಭಾವದಿಂದ ಬಂದುದೆಂದು ಬೇರೆ ಹೇಳಬೇಕಾಗಿಲ್ಲ.

ಹತಾಹತ, ರಾಳಿ, ಮೆತ್ತೆ, ಚರಪಿ, ಹೇಂಟೆ, ಗೋಂದು ಹಾಕಿ, ಹಂಗಲುಕಡ್ಡಿ, ಪಾಲುಮಾರಿಕೆ ಇತ್ಯಾದಿ ಶಬ್ದಗಳು ಪ್ರಾದೇಶಿಕವೆಂದೂ ಕರಾ, ಹೊಂದುವಣೆ, ಈ ಪ್ರಯೋಗಗಳು ಅಪರಿಚಿತವೆಂದೂ ತೋರದೆ ಇರವು.

ಭಾವವನ್ನು ಅರಳಿಸುವ, ವಿಚಾರಮಾಡಲು ಹಚ್ಚುವ, ತೆಳುಹಾಸ್ಯದ ಸ್ವಾಭಾವಿಕ ನಿರೂಪಣದಿಂದ ಮನೋರಂಜನೆಗೈಯುವ ಈ ಗದ್ಯಗ್ರಂಥ ಸ್ವಾಗತಾರ್ಹವಾಗಿದೆ.

## ೨. ಬಂಧನದ ಆಚೆ (ಅನುವಾದಕರು : ಶ್ರೀ. ಪದ್ಮರಾಜ ಹುನಗುಂದ)

ಇದು "ಬಂಧನಾಚ್ಯಾ ಪಲೀಕಡೆ" ಎಂಬ ಮರಾಠಿ ಕಾದಂಬರಿಯ ಅನುವಾದ. ಕನ್ನಡದಲ್ಲಿ ಕಾದಂಬರಿಗಳ ಕೊರತೆ ಇದೆ; (೧೯೩೭) ಅಂತೆಯೇ ಈಗ ಇಂತಹ ಅನುವಾದಗಳೂ ಕೂಡ ಅನವಶ್ಯವಲ್ಲವೆಂದು ಹೇಳಬಹುದು. ಇದೊಂದು ಸಾಮಾಜಿಕ ಸಮಸ್ಯಾತ್ಮಕ ಕಾದಂಬರಿ. ನಿಜವಾದ ಆರ್ಯ ಸಂಸ್ಕೃತಿಯು ಅಳಿದು ಹೋಗಿದೆ. ಅದರ ಹೆಸರಿನಿಂದ ಅಜ್ಞಾನ, ಹೇಡಿತನ, ಮೂಢತನ, ಅಸತ್ಯ ಇವುಗಳ ಬಂಧನದಿಂದ ಕೂಡಿದ ಸಮಾಜರಚನೆ ತಲೆದೋರಿದೆ. ಈ ಕೃತ್ರಿಮ ಬಂಧನಗಳನ್ನು ಮನ್ನಿಸದೆ ಅವುಗಳ ವಿರುದ್ಧವಾಗಿ ನವೀನ ತರುಣರು ಕ್ರಾಂತಿಯನ್ನು ಹೂಡುತ್ತಾರೆ. ಗತಾನುಗತಿಕರು ಹಳೆಯದನ್ನೇ ಉಳಿಸಬೇಕೆನ್ನುತ್ತಾರೆ. ಇಂತಹ ದ್ವಂದ್ವದಲ್ಲಿ ಈ ಕಾದಂಬರಿಯ ನಾಯಕ ಪ್ರಭಾಕರನು ಸ್ವತಂತ್ರವಾಗಿ ವಿಚಾರಮಾಡಿ, ಕ್ರಾಂತಿಕಾರಕ ರೀತಿಯಲ್ಲಿ ವರ್ತಿಸುತ್ತಾನೆ. ಉಚ್ಚಬ್ರಾಹ್ಮಣರ ಕುಲದಲ್ಲಿ ಜನಿಸಿದ್ದರೂ ಪತಿತ ವೇಶ್ಯೆಯೆಂದು ತಿಳಿಯಲಾದ–ಆದರೆ ಪ್ರಭಾಕರನ ದೃಷ್ಟಿಯಲ್ಲಿ ದೇವತೆಯಂತಿರುವ– ಮೈನೆಯನ್ನು ಮದುವೆಯಾಗುತ್ತಾನೆ. ತನ್ನ ತಂಗಿ ಶಾಂತಿಯನ್ನು ನ್ಯಾಯಾಸ್ಥಾನದ ಸಹಾಯದಿಂದ ತಾಯಿತಂದೆಗಳ ಸೆರೆಮನೆಯಿಂದ ಬಿಡಿಸಿ ಅವಳೊಪ್ಪಿದ ಅರುಣನೆಂಬ ಪರಪ್ರಾಂತದ– ಪರಮತೀಯನೂ ಆಗಿರಬಹುದು– ತರುಣನೊಡನೆ ಮದುವೆ ಮಾಡಿಸುತ್ತಾನೆ. ಈ ತೊಡಕಿನಲ್ಲಿ ಪ್ರೇಮಲ ಹೃದಯದ ತಾಯಿಯು ಆಹುತಿಯಾಗುತ್ತಾಳೆ. ಆರ್ಯಸಂಸ್ಕೃತಿಯ ಕಟ್ಟಾಭಿಮಾನಿಯಾದ ಮುಂದಾಳು, "ಸಮಾಜದ ಪೂಜೆಯನ್ನು ಮಾಡುವ ಮಾನಸಿಕ ದಾಸ್ಯದ" ಗೋವಿಂದರಾಯನು ಮಗನ ಕ್ರಾಂತಿಕಾರಕ ವಿಚಾರ– ಆಚಾರಗಳನ್ನು ಎಷ್ಟೇ ತಿರಸ್ಕರಿಸಿದರೂ ಕೊನೆಗೆ "ಪ್ರಭಾ! ನಿನ್ನದೇ ಸರಿ, ನಾನು ತಪ್ಪಿದೆನು. ನಿನ್ನಲ್ಲಿಯೇ ಸತ್ಯದ ಅಂಶವು ಹೆಚ್ಚಿತ್ತು ನಾನು ನಿನ್ನೆಡೆಗೆ ಧಾವಿಸಬೇಕಾಯಿತು" ಎಂದು ಹೇಳಬೇಕಾಗುತ್ತಿದೆ. "ತಾಯಿ, ತಂದೆ, ಧರ್ಮ, ನೀತಿ, ಸಮಾಜ ಮುಂತಾದ ಎಲ್ಲ ಬಂಧನಗಳನ್ನೂ ಹರಿದೊಗೆದು ಮನಸ್ಸಿಗೆ ಪವಿತ್ರವೆಂದು

ತೋರಿದ ಕೆಲಸವನ್ನು ಮಾಡುವುದು'' ಕಾದಂಬರಿಯ ನಾಯಕ ಪ್ರಭಾಕರನ ಗುರಿಯಾಗಿದೆ.

ಈ ಕಾದಂಬರಿಯಲ್ಲಿ ಕುತೂಹಲವನ್ನು ಹೆಚ್ಚಿಸುವ ಕಥಾನಕವಿದೆ. ಅದಕ್ಕಿಂತ ಹೆಚ್ಚಾಗಿ ಮನವನ್ನು ಸೆಳೆಯುವ ತಾತ್ವಿಕ ಚರ್ಚೆಯಿದೆ. ಅಲ್ಲಲ್ಲಿ ಸಾಹಿತ್ಯ ಚರ್ಚೆ ಬರುತ್ತದೆ. ಅನೇಕ ಸಾಮಾಜಿಕ ಸಮಸ್ಯೆಗಳು, ನಮ್ಮ ಧರ್ಮ, ದೇವರು, ವಿದ್ಯಾಭ್ಯಾಸ ಕ್ರಮ, ವಿವಾಹ ಸಂಸ್ಥೆ ಇವುಗಳ ಮೇಲಿನ ಕಟುಟೀಕೆಗಳಿವೆ. ''ಮೈನೆಯ ಕರುಣ ಕಥೆ'' ಎಂಬ ಭಾಗವು ಆಕರ್ಷಕ ಹಾಗೂ ಹೃದಯದ್ರಾವಕವಿದೆ. ಅದರಲ್ಲಿಯ ಕಥನಶೈಲಿ ಕೌಶಲ್ಯಪೂರ್ಣ ವಿದೆ. ಓದುಗರ ಮನಸ್ಸಿನಲ್ಲಿ ಕುತೂಹಲವನ್ನು ಹೆಚ್ಚಿಸಿ ಅವರ ಮೆದುಳಿಗೆ ವಿಚಾರಮಾಡಲು ಹಚ್ಚುವಂತಿದೆ, ಈ ಕಾದಂಬರಿ.

''ಕಥಾನಾಯಕನು ಆಧುನಿಕ ಕಾಲದ ವಿಚಾರವಾದಿಗಳ ಮೂರ್ತಿ ಮಂತ ಆದರ್ಶ ಸ್ವರೂಪನು'' ಎಂದು ಸಂಪಾದಕರು ಹೇಳುತ್ತಾರೆ. ಕಥಾನಾಯಕನು ತನ್ನನ್ನು ಹೀಗೆ ವರ್ಣಿಸಿಕೊಳ್ಳುತ್ತಾನೆ. ''ಪ್ರಾರಬ್ಧ ನಿರ್ಮಿತ ಪರಿಸ್ಥಿತಿಯ ಸೆರೆಯನ್ನು ಸೆಳೆದೊಗೆದು ತನ್ನದೊಂದು ಸ್ವತಂತ್ರ ಉಜ್ವಲವಾದ ವಿಶ್ವವನ್ನು ನಿರ್ಮಾಣಮಾಡುವ ವ್ಯಕ್ತಿತ್ವವು ನನಗೆ ಬೇಕು. ನನ್ನ ಹೃದಯ ಸಾಗರದಲ್ಲಿ ಉಕ್ಕುವ ಆಶೆ-ಇಚ್ಛೆ-ಆಕಾಂಕ್ಷೆಗಳ ಕೋಲಾ ಹಲದ ಮೇಲೆ, ಶಾಂತವಾದ ಪ್ರಣಯದ ರೆಕ್ಕೆಗಳನ್ನು ಪಸರಿಸುವ ಆಕಾಶವು ನನಗೆ ಬೇಕು.... ಆ ಬಂಧನದ ಆಚೆಯ ಆ ಹೃದಯಸಂಗೀತವನ್ನು ನನ್ನ ಆತ್ಮವು ಅರಸುತ್ತದೆ. ನನ್ನ ಮನವೊಪ್ಪಿದ್ದನ್ನೇ ನಾನು ಮಾಡುವವನು. ನಾಲ್ಕು ಜನರಂತೆ ನಡೆಯುವದು ನನಗೆ ಬೇಕಿಲ್ಲ....'' ಇದನ್ನು ಒಪ್ಪಿದರೂ ಅವನ ವಿಷಯದಲ್ಲಿ ವಾಚಕರಿಗೆ ಗೌರವವುಂಟಾಗಬಹುದೆಂದು ಹೇಳುವದು ಕಠಿಣ. ಅವನ ವಿಚಾರ-ಆಚಾರ ಸ್ವಾತಂತ್ರ್ಯವನ್ನು ಹೊಗಳಬಹುದು. ಆದರೆ ಪ್ರಭಾಕರನಿಗೆ ಸ್ವಾತಂತ್ರ್ಯ-ಸ್ವೇಚ್ಛಾಚಾರಗಳಲ್ಲಿ ಭೇದವೇ ಕಂಡು ಬರುವದಿಲ್ಲ. ಆತನ ''ವಿಚಾರಗಳು ವಿಚಾರಣೀಯವಾಗಿದ್ದರೂ ಸಂಪಾದ ಕರು ಹೇಳುವಂತೆ ವಿಚಾರವಾದದ ಕಸುಕು ಅವಸ್ಥೆಯಲ್ಲಿ ಆ ಹಾದಿಗೆ ಬಿದ್ದ ಪ್ರತಿಯೊಬ್ಬ ಯುವಕನಿಗೆ ಗಂಟುಬೀಳುವ ಪಿಶಾಚ"ದ ದಾಸನು ಅವನಾಗಿದ್ದಾನೆ. ಈ ಸ್ವಸ್ವರೂಪ ಜ್ಞಾನವಿಲ್ಲದೆ ಒಮ್ಮೊಮ್ಮೆ ಬಾಯಿಯನ್ನು

ಬಲ್ಲಂತೆ ಹರಿಬಿಡುತ್ತಾನೆ. ಒಮ್ಮೆ ಆತನು ತನ್ನ ತಂದೆಗೆ ''ಚೆಲ್ಲಿದ ತುಣುಕಿನಿಂದ ಸುಮ್ಮನಾಗುವ ನಾಯಿಗಳು ನೀವು; ಮನುಷ್ಯರಲ್ಲ.'' ಎಂದು ಅನ್ನುತ್ತಾನೆ. ಇಂತಹ ಕಟುಮಾತುಗಳು ಸಾಕಷ್ಟಿವೆ. ಪ್ರಭಾಕರನು ಪ್ರಾರಬ್ಧನಿರ್ಮಿತ ಬಂಧನದ ಆಚೆಗೆ ಹೋಗಲು ಯತ್ನಿಸಿರಬಹುದು. ಆದರೆ ಸ್ವನಿರ್ಮಿತ ಬಂಧನದ ಆಚೆಗೆ ಹೋಗಬಲ್ಲನೇ? ಎಂಬ ಪ್ರಶ್ನೆ ನಮ್ಮನ್ನು ಎದುರಿಸುತ್ತಿದೆ. ಆತನ ವಿಚಾರಗಳು ಏಕಪಕ್ಷೀಯ ಹಾಗೂ ಭ್ರಾಮಕವಲ್ಲವೆಂದು ಹೇಳಲು ಬರುವಂತಿಲ್ಲ. ಅಲ್ಲದೆ ಸ್ವಾತಂತ್ರ್ಯ-ಸ್ವೇಚ್ಛೆಗಳ ಹೊರತು ಅವನಲ್ಲಿ ಉಚ್ಚ ಧ್ಯೇಯವೇನಾದರೂ ಇದ್ದಂತೆ ಕಂಡುಬರುವದಿಲ್ಲ. ವಿಚಾರ ವಿವೇಕಗಳಿಗೆ ಅವಕಾಶವೇ ಇಲ್ಲದ ಸಂದರ್ಭದಲ್ಲಿ ಚಿಗಿತ ಶಾಂತಿ-ಅರುಣರ ಪ್ರಣಯವನ್ನು ಈತನು ಸಮರ್ಥಿಸುತ್ತಾನೆ. ಆದರೆ ಈತನು ಸ್ವಾರ್ಥತ್ಯಾಗ ಮಾತ್ರ ಮಾಡಲಾರ. ಅವರ ಮದುವೆ ನಡೆಯುವವರೆಗೆ ತನ್ನ ಹಾಗೂ ಮೈನೆಯ ಗೆಳೆತನವನ್ನು ಮುಚ್ಚಿಡುವ ಮೋಸಕ್ಕೆ ಆತನೂ ಸಿದ್ಧನಿದ್ದನು. ಅರ್ಥಾತ್ ಅವನು ಪುನಃಪುನಃ ಹೇಳುತ್ತಿರುವಂತೆ ಯಾವಾಗಲೂ ಸತ್ಯವನ್ನೇ ಆಶ್ರಯಿಸುವನೆಂದಲ್ಲ. ಮೈನೆಯಿಂದ ಒಂಟಿ ಹೆಸರಿನಿಂದ ಕರೆಯಿಸಿಕೊಳ್ಳುವ ಲವಲವಿಕೆ ಹಾಗೂ ಗಾಡಿಯಲ್ಲಿ ಮೈನೆಯ ಹತ್ತಿರವೇ ಕುಳಿತುಕೊಳ್ಳುವುದು.... ಇಂತಹ ಹಂಬಲಗಳ ಹುಡುಗಾಟಿಕೆಯ ವೃತ್ತಿಗೂ ಆತನ ಗಂಭೀರ, ಉಚ್ಚ ವಿಚಾರಗಳ ಉಪನ್ಯಾಸಕ್ಕೂ ಸರಿಹೋಗುವದಿಲ್ಲ. ಅಲ್ಲದೆ ಕೊನೆಗೆ "ತಾಯಿ ತಂದೆಗಳ ದುಃಖದ ಕಂಬನಿಗಳನ್ನು ಸತ್ಯಕ್ಕಾಗಿ ಬದಿಗೆ ಸರಿಸಿ, ರೂಢಿಯ ಬಂಧನಗಳನ್ನು.... ಹರಿದೊಗೆಯಲು ಸಮರ್ಥವಾದ ಮನಃಸ್ವಾತಂತ್ರ್ಯದಲ್ಲಿಯ ತೇಜಸ್ವಿಯಾದ ಚೈತನ್ಯವು ಮದುವೆಯ ನಂತರ ವರ್ಷಾನುವರ್ಷಗಳ ವರೆಗೆ ಸುಪ್ತಾವಸ್ಥೆಯಲ್ಲಿಯೇ ಇರುವುದು ಆಶ್ಚರ್ಯವಲ್ಲವೇ ?" ಎಂದು ಆತನೇ ಕೇಳುವ ಪ್ರಶ್ನೆಗೆ ಕಾದಂಬರಿಯಲ್ಲಿ ಸಮಾಧಾನವೇನೂ ಇಲ್ಲ.

ಮೈನೆಯ ಪಾತ್ರವು ಹೆಚ್ಚು ಸಜೀವ-ಸ್ಪಷ್ಟ-ಆಕರ್ಷಕವಾಗಿದೆ. ದೇವ, ಧರ್ಮ, ನೀತಿ, ಸಮಾಜಗಳ ವಿಷಯದಲ್ಲಿರುವ ಅವಳ ರೊಚ್ಚಿಗೆ-ಕಟುನುಡಿಗಳಿಗೆ-ಅರ್ಥವಿದೆ. ಅವಳ ವಿಷಯದಲ್ಲಿ "ದುಷ್ಟ ದೈವವು ತನ್ನ ಸೇಡನ್ನು ತೀರಿಸಿಕೊಂಡಿತ್ತು." ' ಹೇಡಿ ದೇವನು ನಿಷ್ಪಾಪ, ಅಸಹಾಯ ಅಬಲೆಯ ಕೌಮಾರ್ಯಭಂಗವನ್ನು ಕಣ್ದೆರೆದು ನೋಡಿದ್ದನು." ಅವಳ ಸ್ವಾಭಿಮಾನವನ್ನು

ಯಾರಾದರೂ ಹೊಗಳಬೇಕು. ಜನರ ದೃಷ್ಟಿಯಲ್ಲಿ ಆಕೆ 'ವೇಶ್ಯೆ'ಯಾದರೂ ಅವಳದು ಸುಸಂಸ್ಕೃತ ಜೀವನ. ಅವಳ ವಿಚಾರಗಳು ಪ್ರಗಲ್ಭವಾಗಿವೆ. ಜೀವನವೆಲ್ಲ ಸ್ವತಂತ್ರ ತಳಹದಿಯ ಮೇಲೆ ಮುಚ್ಚುಮರೆಯಿಲ್ಲದೆ ತೆರವಾಗಿ ಬೆಳೆದಿದೆ. ಸೃಷ್ಟಿಯೆಲ್ಲ ಬಂಧನಗಳಿಂದ ಬಿಗಿಯಲ್ಪಟ್ಟಿದೆ. ಮನುಷ್ಯನಿಗೆ ಮನಸ್ಸಿದೆ. ಬುದ್ಧಿಯಿದೆ, ಭಾವನೆಯಿದೆ. ಅಂತೆಯೇ ಮನುಷ್ಯನು ಸ್ವತಂತ್ರನು. ಅವಳೂ ಮನುಷ್ಯಳು. ಸ್ವಾತಂತ್ರ್ಯದ ಸ್ವೈರ-ಅನಿರ್ಬಂಧ ವಾತಾವರಣ ದಲ್ಲಿಯೇ ಅವಳು ತನ್ನ ಜೀವನ ಸಾಗಿಸಿದ್ದಳು. ಇದುವೇ ಪ್ರಭಾಕರ–ವೈನೆಯರ ಸ್ನೇಹದ, ಪ್ರಣಯದ, ವಿವಾಹದ ರಹಸ್ಯ. ಆದರೆ ವೈನೆಯು ಪ್ರಭಾಕರನಿಗಾಗಿ ತನ್ನ ಸುಖವನ್ನು ಬದಿಗಿಡಲು ಒಪ್ಪುತ್ತಾಳೆ. ಅವನಿಗಾಗಿ ಜನನಿಂದೆಗೆ ಹೆದರುತ್ತಾಳೆ "ನನ್ನ ದೇವನು ನನ್ನ ಬಾಗಿಲಿಗೆ ಬಂದಾಗ ಅವನ ಅಡಿದಾವರೆಯ ಮೇಲೆ ಅರ್ಪಿಸಲು ನನ್ನ ಹತ್ತಿರ ಏನೂ ಇರಲಿಲ್ಲ–ದೇವ ಬೇಗನೇಕೆ ಬರಲಿಲ್ಲ"?...."ಪ್ರಭಾ, ನನ್ನನ್ನು ಬಿಟ್ಟು ಬಿಡಬಾರದೇ, ಕಾಲನ ಹೊಳೆಯಲ್ಲಿ ಹರಿಯಬೇಕು.... "ಕಾಲ್ಕೆಳಗೆ ತುಳಿದು ಮೂಸಿದ ಹೂಗಳನ್ನು ನಿಜವಾದ ಭಕ್ತನು ದೇವನಿಗೆ ಎಂದಾದರೂ ಅರ್ಪಿಸುವನೇ" ? ಎಂದು ಅವಳು ಕಾವ್ಯಮಯ ರೀತಿಯಲ್ಲಿ ಹೇಳುವಾಗ, ಕೊನೆಗೆ "ನನ್ನ ಪ್ರಭಾಕರನಲ್ಲಿ ನನಗೆ ವಿಶ್ವದ ಸಾರಭೂತ ತತ್ವವು ಕಾಣುತ್ತದೆ" ಎಂದು ಅವಳು ಒಪ್ಪುವಾಗ ವೈನೆಯು ಎಂತಹ ಉಚ್ಚಮಟ್ಟದಲ್ಲಿದ್ದಾಳೆಂಬುದು ತಿಳಿಯಬಹುದು. 'ತಾಯ್ತನ' 'ಹೆಣ್ತನ'ಗಳ ಮೂರ್ತಿವೆತ್ತಂತೆ ಇರುವ ಲಕ್ಷ್ಮೀಬಾಯಿಯ ಪಾತ್ರವು ಸ್ವಾಭಾವಿಕವಾಗಿದ್ದು, ಲೇಖಕರ ಮಾನವ ಸ್ವಭಾವದ ಪರಿಚಯವನ್ನು ತೋರಿಸುತ್ತದೆ.

ಕಾದಂಬರಿಯು ಪ್ರಚೋದಕವೂ ಮನೋರಂಜಕವೂ ಆಗಿದೆ. ಆದರೆ ವಿಶಾಲ ಜೀವನದ ವಿಪುಲ ಪರಿಚಯವು ಇಲ್ಲಿಲ್ಲ. ನಾಯಕನು ಕೃತಕೃತ್ಯ ನಾದಂತೆ ಎನಿಸುವದಿಲ್ಲ. ಕೊನೆಗೆ ಗೋವಿಂದರಾಯರ ವಿಚಾರಗಳಲ್ಲಿ ಪರಿ ವರ್ತನವನ್ನು ಲೇಖಕರು ಮಾಡಿಸಿದ್ದರೂ ಪ್ರಭಾಕರನ ವಿಚಾರಗಳು ಏಕ ಪಕ್ಷೀಯವೆಂದು, ಎನಿಸದೆ ಇರಲಾರವು. ಶಾಂತಿ ಹಾಗೂ ಆಕೆಯ ಅಣ್ಣ ಪ್ರಭಾಕರ ಇವರ ಸಂವಾದ ಪತ್ರಲೇಖನಗಳು ಔಚಿತ್ಯವನ್ನು ಮೀರಿದಂತಿವೆ. "ನೀವು ಗಂಡಸರೆಂದರೆ ಬಲು ಅಡ್ನಾಡಿ ಜಾತಿ" ಎಂದು ಅಣ್ಣನಿಗೆ ತಂಗಿ ಬರೆಯುವ ಉದಾಹರಣೆಯಿದೆ.

ಸಂಪಾದಕರೂ ಅನುವಾದಕರೂ ಮೊದಲಿಗೆ ಕೆಲವು ಉಪಯುಕ್ತ ಮಾತುಗಳನ್ನು ಬರೆದಿದ್ದಾರೆ. ಅನುವಾದಕರ ಭಾಷೆ ಸರಸವಾಗಿದೆಯೆಂದೇ ಹೇಳಬೇಕು.

ಆದರೆ ಶಬ್ದದೋಷಗಳು ಮಾತ್ರ ಹೇರಳವಾಗಿವೆ. 'ಉಚ್ಛೃಂಖಲ' ಎಂಬಶಬ್ದವು 'ಉತ್ಛ್ರಂಖಲ, ಉತ್ಸೃಂಖಲ, ಉತ್ಛಂಖಲ, ಉತ್ಶೃಂಖಲ" ಎಂಬುದಾಗಿ ಅನೇಕ ವಿಧದಲ್ಲಿ ತಪ್ಪಾಗಿ ಅಚ್ಚಾಗಿದೆ. 'ಹಲಕಲ್ಲೋಲ,' 'ಸ್ವಾರಶ್ಯ', 'ಎದರಲ್ಲಿಯೂ' 'ಮನಸ್ತಾಪ' 'ಆಕೃತಿಮವಾಗಿ' 'ಕನ್ಸನ್ನೆ,' 'ಪರಮೋಚ್ಛ'-ಇತ್ಯಾದಿ ಅಶುದ್ಧ ಪ್ರಯೋಗಗಳಿವೆ.

" ಪತ್ರದ ಮೇಲೆ ವಿಚಾರಮಾಡದರು." (ಪು. ೪೯)

" ಕಣ್ಣೆತ್ತುತಲೆ ಕಣ್ಣು ಕಣ್ಣುಗಳಿಂದ ಹೊರಹೊಮ್ಮಿತು " (೯೭)

" ಯಾವ ಹೃದ್ಭಾವವು....ನಿನ್ನನ್ನು ಇಲ್ಲಿಗೆ ಕರೆತಂದ ಆ ಹೃದ್ಭಾವವನ್ನು ಕೇಳು " ಪು. (೨೨೩)

ಇತ್ಯಾದಿ ಅಸ್ಪಷ್ಟ, ಅಸ್ವಾಭಾವಿಕ, ವಾಕ್ಯರಚನೆಗಳಿವೆ. ಇಲ್ಲಿ ಬರುವ ಮುದ್ರಣದೋಷ, ವಿರಾಮ ಚಿಹ್ನಗಳ ದೋಷಗಳ ಸಂಖ್ಯೆ ಸುಮಾರು ೭೫ಕ್ಕೆ ಕಡಿಮೆ ಇರಲಾರದು..... ಆದರೆ ಒಂದು ಸಾಮಾಜಿಕ ಸಮಸ್ಯಾತ್ಮಕ-ರಸಯುಕ್ತ ಕಾದಂಬರಿಯನ್ನು ಕನ್ನಡಿಗರಿಗೆ ಒದಗಿಸಿ ಕೊಟ್ಟ ಅನುವಾದಕರೂ ಪ್ರಕಾಶಕರೂ ನಮ್ಮ ಮನ್ನಣೆಗೆ ಪಾತ್ರರಾಗಿದ್ದಾರೆ.

## ೩. ಸೂತ್ರದ ಬೊಂಬೆ (ಅನುವಾದಕರು: ಎಸ್. ಜಿ. ಶಾಸ್ತ್ರಿಗಳು)

ಐರೋಪ್ಯ ರಂಗಭೂಮಿಯಲ್ಲಿ ಕ್ರಾಂತಿಯನ್ನುಂಟುಮಾಡಿದ ನಾರ್ವೆ ದೇಶದ ಇಬ್ಸೆನ್ನನ Doll's House (ಗೊಂಬೆಯ ಮನೆ) ಎಂಬ ನಾಟಕದ ಅನುವಾದವಿದು. ಇಬ್ಸೆನ್ನನ ಈ ನಾಟಕವು ರಚನೆಯ ದೃಷ್ಟಿಯಿಂದ, ಸಾಮಾಜಿಕ ಸಮಸ್ಯೆ ಹಾಗೂ ನೋರಾನ ಪಾತ್ರನಿರ್ವಹಣ ಇವುಗಳ ಮೂಲಕ ಉತ್ತಮ ನಾಟಕವೆಂದು ಹೆಸರು ಹೊಂದಿದೆ. ಅನೇಕ ದಿನಗಳ ಹಿಂದೆ ನಡೆದ ಘಟನೆಗಳ ಫಲವಾದ ಪ್ರಸಂಗದ ಕೊನೆಯನ್ನು ಚಿತ್ರಿಸುವ ನಾಟಕಗಳ ವರ್ಗಕ್ಕೆ ಈ ಕೃತಿ ಸೇರಿದೆ. ಕೇವಲ ಒಂದು ಘಟನೆಯನ್ನು ಪರಿಣಾಮಕಾರಕವಾಗಿ ನಾಟಕಕ್ಕೆ ಇಳಿಸುವದರಲ್ಲಿಯೇ ಇಂತಹ ನಾಟಕಗಳ ಕೌಶಲ್ಯ ಕಂಡು ಬರುತ್ತದೆ. ಎರಡು ಮೂರು ದಿನಗಳ ಅವಧಿಯಲ್ಲಿ ಮುಗಿದು ಹೋಗುವ ಪ್ರಸಂಗ, ಹಿನ್ನೆಲದ ಕಥೆ ಮೊದಲೇ ನಡೆದು ಹೋಗುವ ಪ್ರಸಂಗ, ಸಾಮಾಜಿಕ ಸಮಸ್ಯೆ, ಮುಖ್ಯಪಾತ್ರಗಳು ಎರಡು ಮೂರು— ಇವುಗಳು ಇಂತಹ ನಾಟಕದ ವೈಶಿಷ್ಟ್ಯಗಳು. "ಸಂಪೂರ್ಣ ರಾಮಾಯಣ," "ಲಂಕಾದಹನ"ಗಳ ಕಾಲವು ಹಿಂದಾಗುತ್ತಿರುವ ಇಂತಹ ಸಮಯದಲ್ಲಿ ಕನ್ನಡಕ್ಕೆ ಇಂತಹ ನಾಟಕಗಳು ಆವಶ್ಯಕವೆಂದು ಬೇರೆ ಹೇಳಬೇಕಾಗಿಲ್ಲ.

ಇಬ್ಸೆನ್ನನು ಸಾಮಾಜಿಕ ಸಮಸ್ಯೆಗಳ ನಿರ್ವಹಣದಲ್ಲಿ ಕೌಶಲ್ಯ ತೋರಿಸಿದ್ದಾನೆ. ಮೂಢ-ರೂಢಿಗಳನ್ನು ಪ್ರತಿಭಟಿಸುವಲ್ಲಿ, ಅರ್ಥರಹಿತ ಸಂಪ್ರದಾಯಗಳ ತೊಡಕಿನ ನೀತಿನಿಯಮಗಳನ್ನು ಅಲ್ಲಗಳೆಯುವದರಲ್ಲಿ, ವ್ಯಕ್ತಿ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯಗಳನ್ನು ಪ್ರತಿಪಾದಿಸುವಲ್ಲಿ ಆತನ ದಿಟ್ಟತನವು ಕಂಡುಬರುತ್ತದೆ. ಆದರೆ ಆತನು ನಮಗೆ ಕೊಟ್ಟಿರುವದು ಸಂಭಾಷಣಾರೂಪದಲ್ಲಿ ತತ್ತ್ವದ ಕಂತೆಯಲ್ಲ; ವೈಯಕ್ತಿಕ ವಿಚಾರಗಳ ಉಪನ್ಯಾಸವಲ್ಲ; ಆದರೆ ಕಲಾಪೂರ್ಣ ನಾಟಕಗಳು. ಪ್ರಸ್ತುತ ನಾಟಕದ ನೋರಾ ಪಾತ್ರವು ಯಾರ ಹೃದಯವನ್ನಾದರೂ ಆಕರ್ಷಿಸದೆ ಬಿಡದು. ಸಾಹಿತ್ಯಕ್ಷೇತ್ರದ ಸುಂದರವಾದ ಪಾತ್ರಗಳಲ್ಲಿ ಅದು ಒಂದಾಗಿದೆ.

ಸಾಹಿತ್ಯದ ಉದ್ದೇಶವು ಮನೋರಂಜನೆಯೋ ತತ್ವಬೋಧೆಯೋ ಎಂಬ ಸಮಸ್ಯೆಯನ್ನು ಈ ನಾಟಕವು ಬಹುಮಟ್ಟಿಗೆ ಬಿಡಿಸುವಂತಿದೆ.

ಪ್ರಾರಂಭಕ್ಕೆ ಕಂಡುಬರುವದು ಒಂದು ಸುಂದರವಾದ ಸುಖಮಯ ವಾದ ಸಂಸಾರ ಚಿತ್ರ. ಮದುವೆಯಾಗಿ ಎಂಟು ವರುಷಗಳಾಗಿದ್ದರೂ ನವ ಪ್ರಣಯಿಗಳಂತೆ ಇರುವ ನೋರಾ, ತೋರ್ವಾಲ್ಡರು. ನೋರಾ ಇನ್ನೂ "ಪುಟ್ಟ ಹಕ್ಕಿ" "ಪುಟ್ಟ ಅಳಿಲು;" ಜೀವನದ ಭೀಕರತೆಯ ಅರಿವಿಲ್ಲದೆ ಸಮಾಜದ ತೊಡಕುಗಳ ಭೀತಿಯಿಲ್ಲದೆ, ಗಂಡ, ಮಕ್ಕಳ ಸಣ್ಣ ಪ್ರಪಂಚದಲ್ಲಿಯೇ ಸ್ವರ್ಗೀಯ ಸುಖವನ್ನು ಕಾಣುವ "ಹುಚ್ಚುಹುಡುಗಿ" ಸಾಲದ್ದಕ್ಕೆ ಗಂಡನಿಗೆ ಹೊಸದಾಗಿ ಹೆಚ್ಚಿನ ಸಂಬಳದ, ಅಧಿಕಾರದ ಕೆಲಸ ದೊರಕಿದೆ. ಈ ಪುಟ್ಟ ಹಕ್ಕಿ ತನ್ನದೇ ಆದ ಗಾನದಲ್ಲಿ ತಲ್ಲೀನವಾಗಿದೆ. ತೋರ್ವಾಲ್ಡನಿಗೆ ನೋರಾ ಪುಟ್ಟ ಪ್ರೇಮದ ನಿಧಿ. ಆದರೆ ನಾಟಕದ ಕೊನೆಗೆ— ಕೇವಲ ಮೂರು ದಿನಸಗಳ ಅವಧಿಯಲ್ಲಿ— ಈ ಸರಸ ಸಂಸಾರದ ನೌಕೆ ಒಡೆದು ಚೂರಾಗುತ್ತದೆ. ಮಧ್ಯರಾತ್ರಿಯಲ್ಲಿ ನೋರಾ ಗಂಡನನ್ನೂ ಮಕ್ಕಳನ್ನೂ ತ್ಯಜಿಸಿ ಮನೆಬಿಟ್ಟು, ಗಂಡನಿಗೆ ಎಲ್ಲ 'ಲೆಕ್ಕಾಚಾರ' ಒಪ್ಪಿಸಿ ಹೊರಟು ಹೋಗುತ್ತಾಳೆ. ಒಮ್ಮೆಲೆ ನಡೆಯುವ ಈ ಸಂಸಾರದ ಸ್ಫೋಟಕ್ಕೆ ಕಾರಣ ವಾಗಿರುವ ಘಟನೆ ಒಂದಿದೆ. ತೋರ್ವಾಲ್ಡನು ಬೇನೆಯಿಂದ ಬಳಲುತ್ತಿರು ವಾಗ ಆತನ ಆರೈಕೆಗಾಗಿ ಅವಳು ಸುಳ್ಳುರುಜುಹಾಕಿ ಕ್ರಾಗ್‌ಸ್ಟಾಡ್‌ ಎಂಬ ನೀಚ ಮನುಷ್ಯನಿಂದ ಹಣವನ್ನು ಸಾಲವಾಗಿ ಪಡೆಯುತ್ತಾಳೆ. ಆಕೆ ಸತ್ತ ತಂದೆಯ ರುಜುವನ್ನು ಅನಿವಾರ್ಯವಾಗಿ ಹಾಕಬೇಕಾಗುತ್ತದೆ. ಆಮೇಲೆ ಅನೇಕ ವಿಧದ ತೊಂದರೆ ಸಹಿಸಿಯೂ ಆ ಸಾಲದ ಹಣವನ್ನು ಕ್ರಮವಾಗಿ ಪಾವತಿ ಮಾಡುತ್ತಿರುತ್ತಾಳೆ. ಕ್ರಾಗ್‌ಸ್ಟಾಡ್‌ನು ಬ್ಯಾಂಕಿನ ಒಂದು ಸಣ್ಣ ನೌಕರಿಯಲ್ಲಿದ್ದನು. ತೋರ್ವಾಲ್ಡನು ಮುಖ್ಯಾಧಿಕಾರಿಯಾದ ಮೇಲೆ ನೀಚನಾದ ಆತನನ್ನು ತೆಗೆದುಹಾಕುವ ವಿಚಾರದಲ್ಲಿದ್ದಾನೆ. ಇದನ್ನು ತಪ್ಪಿಸಬೇಂದು ಆತನು ನೋರಾನ ಸಹಾಯವನ್ನು ಕೋರುತ್ತಾನೆ. ಅಲ್ಲದೆ ಆ ರೀತಿಯ ಸಹಾಯವು ದೊರೆಯದೆ ಇದ್ದರೆ ನೋರಾನ ಶಾಸನವಿರುದ್ಧವಾದ ಕೃತ್ಯವನ್ನು ಬೈಲಿಗೆಳೆಯುವದಾಗಿ ಹೆದರಿಸುತ್ತಾನೆ. ತನ್ನ ಹೆಂಡತಿಯಿಂದ ತನ್ನ ಕೀರ್ತಿಗೆ ಕುಂದು, ಎಂದು ತೋರ್ವಾಲ್ಡ್ ತಿಳಿದುಕೊಳ್ಳುತ್ತಾನೆ.

ತನ್ನ ಸಂತೋಷ ಹೆಮ್ಮೆಗಳಿಗೆ ಕಾರಣಳಾದವಳು ಸುಳ್ಳಗಾತಿ; ಒಬ್ಬ ಪಾತಕಿ. "ಬುದ್ಧಿಯಿಲ್ಲದ ಒಬ್ಬ ಹೆಂಗಸಿಗೋಸ್ಕರ ಮಂದಭಾಗ್ಯನಾಗಿ ಕೆಳಗೆ ಬೀಳ ಬೇಕಾಗಿ ಬಂತು" ಎಂದು ಭಾವಿಸಿ, ನೋರಾ ಇನ್ನು ಮುಂದೆ ಮಕ್ಕಳ ಗೋಜಿಗೆ ಬರಕೂಡದೆಂದೂ ಆ ವಿಷಯದಲ್ಲಿ ಅವಳನ್ನು ನಂಬಲಾರನೆಂದೂ ಹೇಳುತ್ತಾನೆ. ಪ್ರೇಮ-ಆದರೆ ಈಗಾಗಲೇ ಅಭಿಮಾನ-ಜಾಗ್ರತವಾದ ನೋರಾನ ಹೃದಯಕ್ಕೆ ಗಂಡನ ಈ ಮಾತುಗಳಿಂದ ವಿಶೇಷವಾದ ವ್ಯಥೆ ಯಾಗುತ್ತದೆ. ಇದು ವರೆಗೆ ತಾನು ಕೇವಲ ಒಂದು ಬೊಂಬೆಯಾಗಿದ್ದಳು. ಗಂಡನ ಇಚ್ಛೆ, ಆನಂದಗಳೇ ತನ್ನ ಇಚ್ಛೆ, ಆನಂದಗಳೂ ಆಗಿ ತಾನು ವ್ಯಕ್ತಿತ್ವ ವಿಲ್ಲದ ಕೇವಲ ವಿಲಾಸದ ಸಾಧನವಾಗಿದ್ದಳೆಂಬುದನ್ನು ಕಂಡುಕೊಳ್ಳುತ್ತಾಳೆ. ಇನ್ನು ಮುಂದೆ ಬೊಂಬೆಯ ಮನೆಯಲ್ಲಿರದೆ "ನನ್ನ ಸಂಸ್ಕಾರವನ್ನು ನಾನು ಮೊದಲು ಪಡೆಯಬೇಕು. ಅದಕ್ಕೆ ನೀನು ಗುರುವಲ್ಲ ಅದು ಸ್ವತಂತ್ರ ಪ್ರಯತ್ನದಿಂದಲೇ ಆಗಬೇಕು........ ಪ್ರಥಮತಃ ನಾನು ಮನುಷ್ಯಜಾತಿಗೆ ಸೇರಿದ ಪ್ರಾಣಿ. ನನಗೆ ಕೂಡ ಊಹಾಪೋಹಜ್ಞಾನವಿದೆ.... ವಿವೇಚನಾ ಶಕ್ತಿಯುಳ್ಳವಳಂತೆ ಇರಬೇಕೆಂದು ನನಗೆ ಆಶೆ.... ನಾನು ಸ್ವಂತ ಅನುಭವ ದಿಂದ ಎಲ್ಲವನ್ನೂ ತಿಳಿಯಬೇಕಾಗಿದೆ." ಎಂದು ಉದ್ಘೋಷಿಸಿ ಗಂಡನಿಗೆ ಎಲ್ಲ ಲೆಕ್ಕಚಾರವನ್ನು ಒಪ್ಪಿಸಿ ಹೊರಟುಹೋಗುತ್ತಾಳೆ. ನೋರಾನ ಈ ಹೋಗುವಿಕೆಯಂದರೆ– ಐರೋಪ್ಯ ರಂಗಭೂಮಿಯ, ಸಮಾಜರಚನೆಯ ಕ್ರಾಂತಿಯ ಹೆಗ್ಗುರುತು.

ಈ ನಾಟಕದಲ್ಲಿ ಅನೇಕ ಸಾಮಾಜಿಕ ಸಮಸ್ಯೆಗಳು ಉಪಸ್ಥಿತವಾಗು ತ್ತವೆ. ಅವುಗಳನ್ನೆಲ್ಲ ಇಲ್ಲಿ ವಿಚಾರಿಸುವದು ಸಾಧ್ಯವಲ್ಲ. ಆದರೆ ಕೆಲವು ವಿಮರ್ಶಕರ ಒಂದು ಟೀಕೆಗೆ ಸಮಾಧಾನ ಕಂಡುಕೊಳ್ಳಬಹುದು. ಮೂರು ದಿವಸಗಳ ಅವಧಿಯಲ್ಲಿ ಬೊಂಬೆಹೆಂಡತಿಯಾದವಳು, ಪುಟ್ಟಗಾನ ಪಕ್ಷಿ ಯಾದವಳು ಇಷ್ಟೊಂದು ವಿಚಾರ ಸ್ವಾತಂತ್ರ್ಯವನ್ನೂ ವ್ಯಕ್ತಿಸ್ವಾತಂತ್ರ್ಯ ವನ್ನೂ ನಿರ್ಭಯತೆಯನ್ನೂ ಪಡೆಯಬಲ್ಲಳೇ ? ಮೋಹದ ಗಂಡನನ್ನೂ ಮಕ್ಕಳನ್ನೂ ತೊರೆಯುವ ಸಾಹಸ ಮಾಡಬಹುದೇ ? ಸಮಾಜಸ್ವಾಸ್ಥ್ಯದ ದೃಷ್ಟಿಯಿಂದ ಅದು ಉಚಿತವೇ? ಈ ಮೂರು ಪ್ರಶ್ನೆಗಳಲ್ಲಿ ನಾವು ಕೊನೆಯ ದಕ್ಕೆ ಇಲ್ಲಿ ಉತ್ತರ ಕೊಡಲಿಚ್ಛಿಸುವದಿಲ್ಲ. ಎರಡನೆಯ ಪ್ರಶ್ನೆಗೆ ನಾಟಕ

ದಲ್ಲಿಯೇ ಉತ್ತರವಿದೆ. ಮೊದಲನೆಯ ಪ್ರಶ್ನೆಗೆ ಮಾತ್ರ ಸಮಾಧಾನ ಹೇಳಬಹುದು. ಕೇವಲ ಮೂರು ದಿನಗಳಾದರೂ ಆಗ ನಡೆದ ಘಟನೆಗಳು ಎಂತಹ ಬೊಂಬೆಗಾದರೂ ಆ ದಿಟ್ಟತನವನ್ನು ತಂದುಕೊಡಬಲ್ಲವೆಂದು ತೋರದೆ ಇರದು. ಕೊನೆಯ ಅನರ್ಥದ ಬೆಳವಣಿಗೆಯ ನಿರ್ವಹಣದಲ್ಲಿ ಇಬ್ಸೆನ್ನನ ಕೌಶಲ್ಯವನ್ನು ಇಲ್ಲಿ ಕಾಣಬಹುದು. ಈ ಕೌಶಲ್ಯಪೂರ್ಣ ಬೆಳವಣಿಗೆಯ ರೀತಿ ಹೀಗಿದೆ:

(೧) ಲಿಂಡೆಯ ಆಗಮನವು ಹಾಗೂ ಆಕೆ "ನೀನು ಇನ್ನೂ ಶುದ್ಧ ಹುಡುಗಿ ನೋರಾ'' ಎಂದು ಹೇಳುವದು ನೋರಾನಲ್ಲಿ ಅಭಿಮಾನವನ್ನು ಜಾಗ್ರತಮಾಡುತ್ತಿವೆ. ಅವಳಿಗೂ ಕೂಡ "ಸಂತೋಷಕ್ಕೂ ಜಂಬಕ್ಕೂ ಕಾರಣವಾದ ವಿಷಯವೊಂದಿದೆ.''

(೨) ಕ್ರಾಗ್‌ಸ್ಟಾಡ್‌ನ ಹೇಳಿಕೆ ನೋರಾನಲ್ಲಿ ವಿಲಕ್ಷಣ ಪರಿವರ್ತನವನ್ನು ತರುತ್ತಿದೆ. "ಹಾಗಾದರೆ ಅದು ಹುಚ್ಚು ಕಾನೂನು. ನಾನು ಅದನ್ನು ನಂಬಲಾರೆ. ಸಾಯುತ್ತಿರುವ ತಂದೆಯ ಮನಸ್ಸಿಗೆ ಕ್ಲೇಶವನ್ನುಂಟುಮಾಡದಿರುವದಕ್ಕೆ ಮಗಳಿಗೆ ಹಕ್ಕಿಲ್ಲವೇ? ಗಂಡನ ಪ್ರಾಣವನ್ನುಳಿಸುವದಕ್ಕೆ ಹೆಂಡತಿಗೆ ಹಕ್ಕಿಲ್ಲವೇ?" ಎಂಬ ಯೋಚನೆ ಅವಳನ್ನು ಕೊನೆಯ ಅನರ್ಥಕ್ಕೆ ಸಿದ್ಧಗೊಳಿಸುತ್ತಿದೆ.

(೩) ಒಮ್ಮೆ ದಾದಿ ಆನ್‌ಳು "ಮಕ್ಕಳೇನು ಎಲ್ಲಾದರೂ ಒಗ್ಗಿಕೊಂಡಿರುತ್ತಾರೆ." ಎಂದು ಹೇಳಿದಾಗ ನೋರಾನ ಉತ್ತರವು ಹೀಗಿದೆ: "ಹಾಗೇನು? ಮನೆಯನ್ನು ಬಿಟ್ಟುಹೋದರೆ ಹೆತ್ತ ತಾಯನ್ನು ಮರೆತು ಬಿಡುವವೇ."

(೪) ಆತ್ಮೀಯ ಸ್ನೇಹಿತನಾದ ಡಾ. ರ್‍ಯಾಂಕನ ಅಸಹ್ಯ ಹೇಳಿಕೆ (ತಾನು ನೋರಾನಲ್ಲಿ ಅನುರಕ್ತನಾಗಿರುವದು) ಅವಳ ಮನಸ್ಸಿಗೆ ಆಘಾತವನ್ನುಂಟುಮಾಡುತ್ತದೆ. ಗಂಡಸಿನ ದೃಷ್ಟಿಯಲ್ಲಿ ಹೆಂಗಸು ಯಾವಾಗಲೂ ಹೀಗೆಯೇ ತಾನೇ, ಎಂದು ಅವಳು ವ್ಯಥೆಪಟ್ಟುಕೊಳ್ಳುತ್ತಾಳೆ.

(೫) ತನ್ನ ಮೋಹದ ಗಂಡನು ತನಗಾಗಿ ಎಂತಹ ಸ್ವಾರ್ಥತ್ಯಾಗವನ್ನಾದರೂ ಮಾಡಬಹುದೆಂದು ಅವಳ ನಂಬಿಕೆ. ಅಂತೆಯೇ ಒಂದು ಅದ್ಭುತ ನಡೆಯಬಹುದೆಂದು ಅವಳು ನಿರೀಕ್ಷಿಸುತ್ತಾಳೆ. ಆಗ ಭಯಂಕರ ನಿರಾಶೆಯಾಗುತ್ತದೆ.

ತೋರ್ವಾಲ್ಡ್ ಹೆಲ್ಮರ: —.... ತನ್ನ ಕೈಹಿಡಿದ ಹೆಂಡತಿಗೋಸ್ಕರವೂ ಯಾವ ಗಂಡನೂ ತನ್ನ ಮಾನವನ್ನು ಕಳೆದುಕೊಳ್ಳಲಾರನು.

ನೋರಾ :— ಅಂಥ ಕೆಲಸವನ್ನು ತಾವು ಪ್ರೀತಿಸಿದವರಿಗೋಸ್ಕರ ಲಕ್ಷಾಂತರ ಜನ ಹೆಂಗಸರು ಮಾಡಬಲ್ಲರು.

(೬) ಲಿಂಡೆಯ ಉಪದೇಶ ಸಮಯೋಚಿತವಾಗಿ ಬರುತ್ತಿದೆ. "ಈ ಮನೆಯಲ್ಲಿ ನಾನು ಕಣ್ಣಾರೆ ನೋಡಿದರೂ ನಂಬಲಾಗದಂತಹ ವಿಷಯ ಗಳು ನಡೆದುಹೋಗಿವೆ. ಹೆಲ್ಮರನಿಗೆ ಪ್ರತಿಯೊಂದೂ ತಿಳಿದುಬಿಡಬೇಕು. ಈ ಮುಚ್ಚುಮರೆ, ಸುಳ್ಳು, ತಟವಟ ಇವುಗಳೆಲ್ಲಾ ಮಾಯವಾಗುವ ತನಕ....ಅವರ ಪ್ರೇಮ ಭದ್ರವಾಗಿರಲಾರದು."

(೭) ನೋರಾನ ವಿಷಯವಾಗಿ ಹೆಲ್ಮರನ ಕೊನೆಯ ವರ್ತನ ಬೊಂಬೆಯನ್ನು ದಿಟ್ಟ ಹೆಂಗಸನ್ನಾಗಿ ಮಾಡದೆ ಇರುವದು ಸಾಧ್ಯವೇ ಇಲ್ಲ. ಉದಾ:— "ಮಕ್ಕಳ ಗೋಜಿಗೆ ನೀನು ಬರಕೂಡದು. ಆ ವಿಷಯ ದಲ್ಲಿ ನಿನ್ನನ್ನೂ ನಂಬಲಾಗುವದಿಲ್ಲ."

ಇನ್ನು, ಭಾಷಾಂತರದ ವಿಷಯವಾಗಿ ಒಂದೆರಡು ಮಾತು ಹೇಳಿ ಮುಗಿಸಬಹುದು. ಮೂಲದ ಹೆಸರುಗಳನ್ನೂ, ವಾತಾವರಣವನ್ನೂ ಇದ್ದ ಕ್ಕಿದ್ದಂತೆಯೇ ಇಡುವದು ಉಚಿತವೆಂದು ತಿಳಿದು ಆ ರೀತಿಯನ್ನು ಇಲ್ಲಿ ಅನುಸರಿಸಲಾಗಿದೆ. ಇದರಿಂದ ಮೂಲದ ರೀತಿಯ ಸರಿಯಾದ ಪರಿಚಯ ವಾಗುತ್ತದೆ. ಆದರೆ ಐರೋಪ್ಯ ಜೀವನದ ಪರಿಚಯವಿಲ್ಲದವರಿಗೆ ಇಂತಹ ಕೃತಿಗಳು ಅಸ್ಪಷ್ಟ, ವಿಚಿತ್ರವೆಂದು ತೋರುತ್ತವೆ. ಇದು ಅಪರಿ ಹಾರ್ಯವೇ ಸರಿ. ಅಲ್ಲದೆ ಇಂತಹ ನಾಟಕಗಳನ್ನು ನಮ್ಮ ರಂಗ ಭೂಮಿಯ ಮೇಲೆ ಅಭಿನಯಿಸಿದರೆ ಸ್ವಾಭಾವಿಕವೆಂದು ಕಾಣಬಹುದೇ, ಎಂಬ ಪ್ರಶ್ನೆಯಂತೂ ಇದೆ. ಹೀಗಿದ್ದರೂ ಶ್ರೀಮಾನ್ ಶಾಸ್ತ್ರಿಗಳು ಸಾಧ್ಯವಿದ್ದ ಮಟ್ಟಿಗೆ ಮೂಲವನ್ನು ನಮ್ಮ ಭಾಷೆಗೆ ಒಗ್ಗುವಂತೆ ಇಳಿಸಿದ್ದಾರೆಂಬುದು ಸಂತೋಷದ ಸಂಗತಿ. ಆದರೆ ಅಲ್ಲಲ್ಲಿ ಬರುವ ಆಂಗ್ಲವಾಕ್ಯರಚನಾಪದ್ಧ ತಿಯೂ, ಶಬ್ದರೂಪಗಳೂ ಈ ಪುಸ್ತಕದ ಭಾಷೆಯನ್ನು ಅಸ್ಪಷ್ಟವಾಗಿಯೂ ಅಸ್ವಾಭಾವಿಕವಾಗಿಯೂ ಕಾಣುವಂತೆ ಮಾಡಿವೆ, ಎಂಬ ಮಾತನ್ನು

ಒಪ್ಪಡೆ ನಿರ್ವಾಹವಿಲ್ಲ. ಉದಾಹರಣೆಗೆಂದು ಕೆಲವು ಪ್ರಯೋಗಗಳನ್ನು ನೋಡಬಹುದು :—

ಪುಟ ೬೮. " ಈ ವಿಷಯದಲ್ಲಿ ನಿನ್ನ ವರ್ತನೆ ನನಗೆ ಅಪಮಾನಕರವಾದರೂ ನಿನ್ನ ಕಾತರವನ್ನು ಮನ್ನಿಸುತ್ತೇನೆ. "

ಪುಟ ೭೩. ನನ್ನ ಮನೆಬಾಗಿಲು ಅವನಿಗೆ ಮುಚ್ಚಿರುತ್ತೆ.

,, ೭೬. ಕೃತಜ್ಞತಾಭಾವಸೂಚಕವಾದದ್ದೊಂದನ್ನು ಹಿಂದೆ ಬಿಡಲಿಲ್ಲ.

,, ೧೦೦. ನಿನ್ನ ಪುರೋಭಿವೃದ್ಧಿ ಅಷ್ಟು ಉಜ್ವಲವಾಗಿ ಕಾಣುತ್ತಿರಲಿಲ್ಲ.

,, ೧೦೮. ಇಂತಹ ಸಂದರ್ಭಗಳಲ್ಲಿ ದೃಶ್ಯದ ಅಂತ್ಯದಲ್ಲಿ ನಿಷ್ಯಾಂತವೂ ಉತ್ಕರ್ಷವುಳ್ಳದ್ದಾಗಿ ಪರಿಣಮಿಸಬೇಕು.

,, ೧೦೯. ನಿನಗೆ ಧನ್ಯಳಾಗಿದ್ದೇನೆ.

,, ೧೧೫. ಮರುದಿನ ಪ್ರಾತಃಕಾಲವನ್ನು ಅದಕ್ಕೇನು ಪಾವತಿ ಮಾಡದೆ ಇದ್ದಲ್ಲಿ.

,, ೧೧೭. ಆ ಕೋರಿಕೆಗೆ ಅತ್ಯಂತ ಧನ್ಯವಾದಗಳು....ಇತ್ಯಾದಿ.

ಇಂತಹ ಇನ್ನೂ ಕೆಲವು ಪ್ರಯೋಗಗಳನ್ನು ಉದಾಹರಿಸಬಹುದು. ಹೇರಳವಾಗಿ ದೊರೆಯುವ ಈ ದೋಷಗಳನ್ನು ತಿದ್ದುವದು ಸಾಧ್ಯವಿತ್ತು; ಅವಶ್ಯವೂ ಅಹುದು.

ಮೂಲನಾಟಕದ ತೀವ್ರತೆ ಭಾಷಾಂತರದಲ್ಲಿ ಸಂಪೂರ್ಣ ಇಲ್ಲವೆಂಬದನ್ನು ಒಪ್ಪಿದರೂ, ಆಂಗ್ಲರೀತಿಯ ವಾಕ್ಯರಚನೆಯ ಅಸ್ವಾಭಾವಿಕತೆ ಹಾಗೂ ಕೆಲವು ಶಬ್ದದೋಷಗಳು ಕಂಡಬಂದರೂ ಕೂಡ ಇಬ್ಸೆನ್ನನ ಸುಂದರ ಕಲಾಕೃತಿಯನ್ನು ಕನ್ನಡಿಗರಿಗೆ ಒದಗಿಸಿಕೊಟ್ಟದ್ದಕ್ಕಾಗಿ ಶ್ರೀಮಾನ್ ಶಾಸ್ತ್ರಿಗಳಿಗೆ ಕನ್ನಡಿಗರು ಕೃತಜ್ಞರಾಗಿರಬೇಕಾಗಿದೆ. ಭಾಷಾಂತರದ ಕೆಲಸ ಸುಲಭವಲ್ಲವೆಂಬ ಮಾತನ್ನು ಎಲ್ಲರೂ ಒಪ್ಪುವರು.

## ೪. ಕ್ರಾಂತಿಯ ದೀಪ (ಶ್ರೀ. ಟಿ. ಎನ್. ಮಹದೇವಯ್ಯ)

ಕನ್ನಡನಾಡಿನ ಜೀವಜ್ಯೋತಿ ಬಸವಣ್ಣನವರ ಜೀವನದ ಒಂದು ಮಹತ್ತರವಾದ ಸನ್ನಿವೇಶವನ್ನು ಆರಿಸಿಕೊಂಡು ಲೇಖಕರು ಮೂರಂಕಿನ ಕಲಾಪೂರ್ಣ ನಾಟಕವನ್ನು ರಚಿಸಿದ್ದಾರೆ. ಕಲಾವಿದರ ವಾಡಿಕೆಯ ಸ್ವಾತಂತ್ರ್ಯವನ್ನು ವಹಿಸಿದ್ದಾರೆ. ಬಸವಣ್ಣನವರ ಅಕ್ಕನೆಂದು ನಂಬಲಾದ ನಾಗ ಲಾಂಬೆಯನ್ನು ಅವರ ತಂಗಿಯನ್ನಾಗಿ ಮಾರ್ಪಡಿಸಿ ಆಕೆಯು ಅಣ್ಣನವರ ಹೋರಾಟದ ಜೀವನದಲ್ಲಿ ಅರ್ಪಿಸಿದ ಸೇವೆಯನ್ನು ಇಲ್ಲಿ ಚಿತ್ರಿಸಲಾಗಿದೆ. ರುದ್ರನಾಟಕಗಳ ಗಂಭೀರ ವಾತಾವರಣ, ದೈವದ ಆಟ ಉದಾತ್ತ ಪಾತ್ರ, ಅಪರಿಹಾರ್ಯವಾದ ರಕ್ತಪಾತ ಇವುಗಳಿಂದ ಕೂಡಿದ ಈ ಕೃತಿ ಹೃದಯಂಗ ಮವಾಗಿದೆ. ಬಸವಣ್ಣನವರ ಅದ್ಭುತರಮ್ಯ ಜೀವನವನ್ನು ಕಲಾವಿದನ ದೃಷ್ಟಿಯಿಂದ ಚಿತ್ರಿಸಿದ ಗ್ರಂಥಗಳಲ್ಲಿ ಈ ನಾಟಕವು ಮೇಲ್ತರಗತಿಯ ದಾಗಿದೆ. ಭಾಷೆಯು ಕಾವ್ಯಮಯವಾಗಿದ್ದು ನಾಟಕದ ವಾತಾವರಣಕ್ಕೆ ಹೊಂದಿಕೆಯಾಗಿದೆ.

ಶಾಂತಿ, ಅಹಿಂಸೆಗಳ ಪುರಸ್ಕರ್ತರನ್ನು ಕ್ರಾಂತಿಕಾರಕರೆಂದು ಹೇಳು ವದು ಕೆಲಜನರಿಗೆ ಸೇರಲಿಕ್ಕಿಲ್ಲ. ಆದರೆ ಕ್ರಾಂತಿಯೆಂದೊಡನೆ ರಕ್ತಪಾತ ವೆಂದೇ ಅರ್ಥಮಾಡಬೇಕೆಂದಲ್ಲ. ಅದ್ಭುತವಾದ ಸಾಮಾಜಿಕ ಧಾರ್ಮಿಕ ಬದಲಾವಣೆಯೂ ಕ್ರಾಂತಿಯೇ. ವಿಕಾಸವು ಸಹಜಧರ್ಮ. ಆದರೆ ವಿಕಾ ಸಕ್ಕೆ ಕೃತ್ರಿಮವಾದ ತಡೆಯುಂಟಾದರೆ ರಭಸದಿಂದ ಬದಲಾವಣೆ ನಡೆದು ಹೋಗುವದು. ಅದನ್ನೇ ಕ್ರಾಂತಿಯೆಂದು ಕರೆಯಲಾಗುವದು. "ಶಿವ ಭಕ್ತರಲ್ಲಿ ಜಾತಿಪಂಥಗಳಿಲ್ಲ." ಎಂಬ ತತ್ತ್ವವು ಕಾರ್ಯಕಾರಿಯಾಗುವಂತೆ ಹರಳಯ್ಯ ಮಧುವಯ್ಯರಲ್ಲಿ ಶರೀರಸಂಬಂಧ ಮಾಡಿಸಿದ ಬಸವಣ್ಣನವರಿಂದ ಸಾಮಾಜಿಕ ಕ್ರಾಂತಿ ನಡೆಯಿತು. ತತ್ಫಲವಾಗಿ ಶಿವಶರಣರ ಕೊಲೆಯೂ ನಡೆಯಿತು. ಅದು ಬಿಜ್ಜಳನ ಕೊಲೆಯಲ್ಲಿ ಪರ್ಯವಸಾನವಾಯಿತು. ಇದುವೇ ಈ ನಾಟಕದ ವಸ್ತು. ಮೊದಲನೆಯ ಅಂಕಿನಲ್ಲಿ ಭಾವಪರಶ ನಾದ, ಎರಡನೆಯ ಅಂಕದಲ್ಲಿ ಲೋಕಕಲ್ಯಾಣ ಮಹಾಕಾರ್ಯದ ಚಿಂತೆಯ ಭಾರದಿಂದ ಕೂಡಿದ, ಮೂರನೆಯ ಅಂಕಿನಲ್ಲಿ ಒಂದು ಅದ್ಭುತ ಸಾಮಾಜಿಕ ಕ್ರಾಂತಿಯಲ್ಲಿ ತೊಡಗಿ, "ರಕ್ತಪಾತಗೈಯದೇ ಭೂಮಿಯಲ್ಲಿ

ಧರ್ಮವನ್ನು ಉಳಿಸಿ ಬೆಳೆಸಬೇಕೆಂದು ಬೋಧಿಸುತ್ತಿರುವಾಗ ಅನಿವಾರ್ಯ ವಾಗಿ ರಕ್ತಪಾತ ನಡೆದಾಗ ಆ ಕ್ರಾಂತಿಗೆ ತನ್ನನ್ನೇ ಬಲಿಕೊಟ್ಟ ಬಸವಣ್ಣನ ಉಜ್ವಲ ಜೀವನವನ್ನು ನಾವು ಈ ನಾಟಕದಲ್ಲಿ ಕಾಣುತ್ತೇವೆ. ಅಲ್ಲದೆ ಲೇಖ ಕರು ಬಿಜ್ಜಳನ ಪಾತ್ರವನ್ನು ಹೆಚ್ಚು ಉದಾತ್ತವನ್ನಾಗಿ ಮಾರ್ಪಡಿಸಿ ತಮ್ಮ ಕಲಾಪ್ರಜ್ಞೆಯನ್ನು ತೋರಿಸಿದ್ದಾರೆ. ಈ ನಾಟಕದ ಬಿಜ್ಜಳನು ಗುಣಗ್ರಾಹಿ ಯಾಗಿದ್ದು ಮಹಾತ್ಮಾ ಬಸವನ ವಿಷಯದಲ್ಲಿ ಗೌರವವನ್ನಿಟ್ಟುಕೊಂಡಿ ದ್ದಾನೆ. ಆತನ ಬೋಧೆಯನ್ನು ಗೌರವಿಸಿ ವಿಶಾಲ ಹೃದಯವನ್ನು ತೋರಿಸುತ್ತಾನೆ. ಆದರೆ ವಿಧಿ ಆತನನ್ನು ಉದ್ರೇಕಿಸಿ ಅವನಿಂದ ಶಿವ ಶರಣರ ಕೊಲೆಯನ್ನು ನಡೆಯಿಸುತ್ತಿದೆ. ಬಿಜ್ಜಳನು ಪಶ್ಚಾತ್ತಾಪಪಟ್ಟರೂ ಆಗ ಕಾಲ ಮಿಂಚಿ ಹೋಗಿತ್ತು. ಶಿವಶರಣರ ಪ್ರತಿಕ್ರಿಯೆಯ ಉದ್ರೇಕಕ್ಕೆ ಬಿಜ್ಜಳನೂ ಬಲಿಯಾಗಬೇಕಾಗುತ್ತದೆ. ಈ ಕಥಾಸರಣಿ ರುದ್ರನಾಟಕಕ್ಕೆ ಬಹು ಚೆನ್ನಾಗಿ ಒಪ್ಪುತ್ತದೆ.

ನಾಟಕವು ಅನೇಕ ಮಾರ್ಮಿಕ ಮಾತುಗಳಿಂದ, ಅಲ್ಲಲ್ಲಿ ಬರುವಕಾವ್ಯ ಲಹರಿಯಿಂದ, ವಚನಗಳನ್ನು ಸನ್ನಿವೇಶಗಳಿಗೆ ಅಳವಡಿಸಿಕೊಂಡಿರುವ ಜಾಣ್ಮೆಯಿಂದ, ಬಸವಣ್ಣನವರ ಅಹಿಂಸೆ, ಶಾಂತಿಗಳ ಬೋಧೆಯಿಂದ ತುಂಬಿದೆ. ಹರಿಹರ ಕವಿಯು ಚಿತ್ರಿಸಿದ ಬಸಣ್ಣನವರ ವ್ಯಕ್ತಿಸ್ವರೂಪವನ್ನು ಉದ್ಧರಿಸಿಕೊಂಡು ಒಂದು ದೃಶ್ಯವನ್ನು ಯೋಜಿಸಲಾಗಿದೆ.

ಪುಸ್ತಕವು ಮುದ್ದಾಗಿಯೇ ಮುದ್ರಿತವಾಗಿದೆ. ಆದರೆ ಕೆಲವು ಅಚ್ಚಿನ ದೋಷಗಳೂ ಶಬ್ದದೋಷಗಳೂ ನುಸುಳಿಕೊಂಡಿವೆ. ಬಿಜ್ಜಳನ ಬಿರುದುಗಳನ್ನು ಹೇಳುವಾಗ "ಶನಿವಾರ ಸಿದ್ಧಿ'' ಎಂಬುದಾಗಿ ಶಾಸನ ಗಳಲ್ಲಿ ಬರುವ ಮಾತನ್ನೂ ಹೇಳಬೇಕಾಗಿತ್ತು. ಬಿಜ್ಜಳನು ಶಿವಶರಣರನ್ನು ಕೊಲ್ಲಿಸಲು ಉದ್ಯುಕ್ತನಾಗುವ ಸನ್ನಿವೇಶದಲ್ಲಿ ಸಹಜವಾದ ಬೆಳವಣಿಗೆ ಯಿಲ್ಲ. ಗಂಗಾಂಬೆಯ ಪಾತ್ರರಚನೆಯ ಉದ್ದೇಶವು ಇನ್ನಿಷ್ಟು ಸ್ಫುಟವಾಗ ಬಹುದಾಗಿತ್ತು. ಈ ನಾಟಕದ ದೃಶ್ಯಗಳ ಹೊಂದಿಕೆ ರಂಗಭೂಮಿಗಿಂತ ಚಲಚ್ಚಿತ್ರಕ್ಕೆ ಹೆಚ್ಚು ಒಪ್ಪುವಂತಿದೆ.

ಕ್ರಾಂತಿದೀಪವನ್ನು ಬೆಳಗಿಸಿದ ಬಸವಣ್ಣನ ಶಾಂತಿಸಂದೇಶವು (ಪುಟ ೪೮) ಮನನೀಯವಾಗಿದೆ. ಒಟ್ಟಿನಲ್ಲಿ ಈ ನಾಟಕವು ರಮಣೀಯವಾಗಿದೆ.

೫. ಹುಚ್ಚು ಬೆಳದಿಂಗಳಿನ ಹೂಬಾಣಗಳು—

(ಶ್ರೀ. ಪಡುಕೋಣೆ. ರಮಾನಂದ)

ಪುಸ್ತಕದ ಹೆಸರೇ ಸೂಚಿಸುವಂತೆ ಈ ಗ್ರಂಥ ಕನ್ನಡಕ್ಕೆ ಹೊಸಬಗೆಯು ದಾಗಿದೆ. ಶ್ರೀ. ರಮಾನಂದರಾಯರ ಹಾಸ್ಯಲೇಖನಗಳಿಗೆ ಶ್ರೀ. ಟಿ. ಮುಕುಂದರಾಯರೆಂಬ ಚಿತ್ರಕಾರರ ಹಾಸ್ಯಚಿತ್ರಗಳ ಜೊತೆ ದೊರೆತು ಈ ಕೃತಿ ಸಂಗ್ರಾಹ್ಯವಾಗಿದೆ. ಹಿಲೇರ್ ಬೆಲಾಕ್‌ರ ಲೇಖನಗಳು ಜಿ. ಕೆ. ಚೆಸ್ಟರ್‌ಟನ್‌ರ ಹಾಸ್ಯಚಿತ್ರಗಳೊಂದಿಗೆ ಕೂಡಿ ಜನಪ್ರಿಯವಾಗಿರುವಂತೆ' ಪ್ರಸ್ತುತ ಪುಸ್ತಕವೂ ಜನಪ್ರಿಯತೆಯನ್ನು ಗಳಿಸಬಲ್ಲದು.

ವಿನೋದ ಸಾಹಿತ್ಯ ಕನ್ನಡದಲ್ಲಿ ತೀರ ಕಡಿಮೆಯೆಂದೇ ಹೇಳಬೇಕು. ಪ್ರಾಚೀನ ಸಾಹಿತ್ಯದಲ್ಲಿ ಅದಕ್ಕೆ ಹೆಚ್ಚು ಅವಕಾಶವಿರಲಿಲ್ಲ. ಹೊಸ ಸಾಹಿತ್ಯ ದಲ್ಲಿ ಆ ಒಂದು ರೂಪಕ್ಕೇ ಲಕ್ಷ್ಯ ಪೂರೈಸಿದವರು ಇಲ್ಲ. ಹರಟೆಯ ಮಲ್ಲರ ಕೆಲವು ಲೇಖನಗಳು ಮಾತ್ರ ಈ ಮಾತಿಗೆ ಅಪವಾದ. ಶ್ರೀರಂಗರ ಸಾಮಾ ಜಿಕ ನಾಟಕ, ಲೇಖನಗಳಲ್ಲಿ, ಶ್ರೀ. ಬೇಂದ್ರೆಯವರ ಕೆಲವು ಹರಟೆಗಳಲ್ಲಿ, ಶ್ರೀ. ಕಾರಂತರ ವಿಡಂಬನ ಬರೆಹಗಳಲ್ಲಿ ಮಾತ್ರ ವಿನೋದ ಸಾಹಿತ್ಯ ಕೆಲ ಮಟ್ಟಿಗೆ ಕಂಡುಬರುತ್ತದೆ. ಶ್ರೀ. ಪ. ರಮಾನಂದರು ಮಾತ್ರ ಈ ರೂಪವನ್ನೇ ತಮ್ಮ ಗುರಿಯಾಗಿಟ್ಟುಕೊಂಡು ಆದರಲ್ಲಿ ಅನೇಕ ಪ್ರಯೋಗಗಳನ್ನು ಮಾಡಿ ನೋಡಿ ಯಶಸ್ವಿಯಾಗಿದ್ದಾರೆ. ಅವರ 'ನನ್ನ ಭಾವ', 'ರಮೇಶ' ಎಂಬ ಬರೆಹಗಳಲ್ಲಿ ಹಾಸ್ಯದ ಬುದ್ಬುದ ತರಂಗದ ಪರಿಚಯ ಕನ್ನಡ ವಾಚಕರಿಗೆ ಈ ಮೊದಲೇ ಆಗಿತ್ತು. ಬಿಡಿಯಾಗಿ ದೊರೆಯುವ ಅವರ ಲೇಖನಗಳನ್ನು ಸಂಗ್ರ ಹಿಸಿ 'ಮನೋಹರ ಗ್ರಂಥಮಾಲೆ' ಯವರು ಉಪಯುಕ್ತ ಪ್ರಕಟನೆ ಕೈಕೊಂಡಿದ್ದಾರೆಂದು ಹೇಳಬೇಕು. ಆದರೆ ಹೀಗೆ ಮಾಡುವಾಗ ಗ್ರಂಥ ದೊಡ್ಡದಾಗಬೇಕೆಂಬ ಉದ್ದೇಶವನ್ನು ಮಾತ್ರವೇ ಇಟ್ಟುಕೊಳ್ಳದೆ ಕೆಲವು ಒಳ್ಳೆಯ ನಗೆ ಚಿತ್ರಗಳನ್ನಷ್ಟೇ ಪ್ರಕಟಿಸಬೇಕಾಗಿತ್ತು. ಈ ದೃಷ್ಟಿಯಿಂದ ನೋಡಿದಾಗ ಬಣಗು ಹಾಸ್ಯದ 'ಪತ್ತೇದಾರನ ಸೂಕ್ಷ್ಮಬುದ್ಧಿ' ಹಾಗೂ ಹಾಸ್ಯವೇ ಕಂಡುಬಾರದ 'ವಿಮೋಚನೆ' 'ಚಿನ್ನದ ತೊಟ್ಟಿಲು' ಪ್ರಯೋಗ ರೂಪವಾಗಿರುವ 'ಶ್ರೀನಿವಾಸನ ಆಕೃತ್ಯ' ಎಂಬ ಲೇಖನಗಳನ್ನು ಸಂಗ್ರಹ ದಲ್ಲಿ ಬಿಡಬಹುದಾಗಿತ್ತೇನೋ?

"ಈ ಪ್ರಯೋಗಗಳೆಲ್ಲ ಬರೀ ಪ್ರಯೋಗಗಳಾಗಿಯೇ ಉಳಿದಿವೆ.

ಅಲ್ಲದೆ ಸಾಹಿತ್ಯದ ಹೊರಗಿನ ಅಂಚನ್ನು ಕೂಡ ಮುಟ್ಟಲಿಲ್ಲವೆಂದು ನಾನೇ ಚೆನ್ನಾಗಿ ಅರಿತಿದ್ದೇನೆ." ಎಂದು ಲೇಖಕರು ಸೌಜನ್ಯದಿಂದ ಸೂಚಿಸಿದ್ದರೂ ಕೂಡ ಅವರ ಪ್ರಯೋಗಗಳು ಉಪಯುಕ್ತವಾಗಿವೆಯೆಂದೇ ಹೇಳಬೇಕು. ಮುನ್ನುಡಿಕಾರರಾದ ಶ್ರೀ. ಬೇಂದ್ರೆಯವರು ಹೇಳಿದ "ಶ್ರೀ. ಪ. ರಮಾನಂದರಾಯರ, ಪರಮಾನಂದಕರವಾದ ಈ ಬರೆಹಗಳು ಕೇವಲ ಪ್ರಯೋಗಗಳೆಂದು ಯಾರೂ ಒಪ್ಪಲಾರರು. ಅಲ್ಲಿಯ ನಗೆಯಲ್ಲಿ ಹೊಸತನ ಇದೆ; ನವೀನ ದೃಷ್ಟಿಯಿದೆ." ಎಂಬ ಮಾತನ್ನು ಒಪ್ಪಬೇಕು. ಆದರೆ 'ಶೈಲಿಯಲ್ಲಿ ಹಿಡಿತವಿದೆ' ಎಂಬ ಮಾತನ್ನು ಸಂಪೂರ್ಣವಾಗಿ ಅನುಮೋದಿಸಲಾಗದು. ಈ ಸಂಗ್ರಹದಲ್ಲಿಯ ಮೊದಲನೆಯದಾದ 'ಕೊಡೆಯ ವಿಚಾರ' ಎಂಬ ಹಾಸ್ಯದ ಹರಟೆ ಅಂತಹ ಜಾತಿಯ ಲೇಖನಕ್ಕೆ ಒಂದು ಆದರ್ಶವಾಗಿದೆ. ಲೇಖಕರ ಇಂತಹ ಪ್ರಬಂಧಗಳ ಸಂಗ್ರಹ ಹೊರಡುವದಾದರೆ ವಾಚಕರಿಗೆ ಹೆಚ್ಚಿನ ಉಪಕಾರವಾದೀತು. ಆಂಗ್ಲ ಲೇಖಕರಾದ ಹಿಲೇರ್ ಬೆಲಾಕ್, ಚೆಸ್ಟರ್‌ಟನ್ ಇಂತಹರ ಹರಟೆಗಳ ಮಾದರಿ ಇಲ್ಲಿದೆ. ಈ ಪುಸ್ತಕದಲ್ಲಿ 'ಹರಿಕಮತನ ನೆನಪು' ಮರೆಯಲಾರದಂತಹದಾಗಿದೆ. ನಾಗಣ್ಣನ ಪಾತ್ರವಂತೂ ವಾಚಕರ ಗೆಳೆಯನಾಗಿ ಎಂದಿಗೂ ಉಳಿಯಬಲ್ಲದು. ಹೀಗೆ ಒಂದೇ ಪಾತ್ರದ ಸುತ್ತಲೂ ಹೆಣೆಯುವ ಲೇಖನಗಳು ಆಡಿಸನ್, ಸ್ಟೀಲ್, ಗೋಲ್ಡ್‌ಸ್ಮಿತ್‌ರ ಬರೆಹಗಳಂತೆ ಮನೋರಂಜಕವಾಗಬಹುದು. 'ಹರಿಕಮತನ ನೆನಪಿ'ನಲ್ಲಿಯ ಬಕಾರದ ಶಬ್ದಸಂಗ್ರಹವು ಗಮನಾರ್ಹವಾಗಿದೆ. 'ಅಂಕುಡೊಂಕು ಸಂಕಪಾಲ' ಎಂಬ ಲೇಖನದ ಹೆಸರಿನಲ್ಲಿಯೇ ತೋರುವ ಹಾಸ್ಯವು ಲೇಖನದ ತುಂಬ ಹರಿದು ಬಂದಿದೆ. 'ಚಿಕ್ಕರಾಮು ಅಜ್ಜಿಗೆ ಹೇಳಿದ ಕಥೆ!' 'ಆತ್ಮಹತ್ಯ' ಇವುಗಳಲ್ಲಿಯ ವಿಡಂಬನೆ ಪರಿಣಾಮಕಾರಿಯಾಗಿದೆ. ಅಂತು ಶ್ರೀ. ರಮಾನಂದರಾಯರು ಕನ್ನಡ ಓದುಗರಿಗೆ ವಿನೋದದ ಊಟವನ್ನೇರ್ಪಡಿಸಿದ್ದು, ಶ್ರೀ. ಟಿ. ಮುಕುಂದರಾಯರ ಹಾಸ್ಯಚಿತ್ರಗಳು ಊಟದಲ್ಲಿ ಉಪ್ಪಿನಕಾಯಿಗಳಂತೆ ರುಚಿಕರವಾಗಿವೆ. ಪುಸ್ತಕದ ಹೊದಿಕೆಯ ಮೇಲೂ ಅರ್ಥಪೂರ್ಣವಾದ ಚಿತ್ರವಿದೆ. ಇಂತಹ ವಿನೋದದ ಊಟ, ಉಪ್ಪಿನಕಾಯಿಗಳನ್ನು 'ಮನೋಹರ ಗ್ರಂಥ ಪ್ರಕಾಶನ ಸಮಿತಿ' ಯವರು ಇನ್ನಿಷ್ಟು ಬಡಿಸಲೆಂದು ಆಶಿಸಬೇಕಾಗಿದೆ.

## ೬. ಬೈಲಹಳ್ಳಿ ಸರ್ವೆ

( ಗೊರೂರು ರಾಮಸ್ವಾಮಿ ಅಯ್ಯಂಗಾರ )

ಗ್ರಾಮಜೀವನದ ಸೊಗಸನ್ನು ವಾಸ್ತವವಾಗಿ, ಆದರೆ ತುಂಬ ನಗೆ ಗಾರಿಕೆಯಿಂದ ಚಿತ್ರಿಸಿ ಕನ್ನಡಿಗರಿಗೆ ಹೊಸ ಸಾಹಿತ್ಯ ಕ್ಷೇತ್ರವನ್ನು ಒದಗಿಸಿ ಕೊಟ್ಟ ಶ್ರೀ. ಗೊರೂರರರು ಕನ್ನಡ ಓದುಗರಿಗೆ ಚಿರಪರಿಚಿತರಾಗಿದ್ದಾರೆ. ಪ್ರಸ್ತುತ ಪುಸ್ತಕ 'ಹಳ್ಳಿಯ ಚಿತ್ರಗಳು' 'ನಮ್ಮೂರಿನ ರಸಿಕರು' ಇವು ಗಳಂತೆಯೇ ಓದುಗರನ್ನು ನಗೆಯ ತೆರೆಗಳ ಮೇಲೆ ಕುಣಿಸಿ, ಹಳ್ಳಿಗರ ಜೀವ ನದ ಸುಸ್ಪಷ್ಟ ಚಿತ್ರದಿಂದ ಮನರಂಜನೆಯನ್ನು ಒದಗಿಸುತ್ತಿದೆ; ವಿಚಾರ ಮಾಡಲು ಹಚ್ಚುತ್ತಿದೆ.

ಬೈಲಹಳ್ಳಿ ಎಂಬ ಗ್ರಾಮವನ್ನು ಸರ್ವೆಮಾಡಲು ಬಂದ ಅಧಿಕಾರಿ ಹಾಗೂ ಆತನ ಜೊತೆಗಾರರು- ಇವರ ಅನುಭವಗಳನ್ನು ಇಲ್ಲಿ ಚಿತ್ರಿಸ ಲಾಗಿದೆ. ಶಿಂಗ್ಲಾಚಾರಿಯ ಜೀನತನ, ಹಳ್ಳಿಯ ಪಟೇಲ, ಮೋಜಿನಿದಾರರ ವಿಚಿತ್ರ ವೇಷ-ಭಾಷೆ ಇವುಗಳಿಂದ ಮೊದಲಾಗುವ ಹಾಸ್ಯದ ಹೊನಲು ನಾಣಿಯಂತಹ ನಗೆಗಾರನ ಪಾತ್ರದಿಂದ ಕೊನೆಯವರೆಗೆ ಅವ್ಯಾಹತವಾಗಿ ಸ್ಫುಟವಾಗಿ ಹರಿದು ಬಂದಿದೆ. ಗೊರೂರರ ನಾಣಿ ನಮ್ಮ ಸಾಹಿತ್ಯದಲ್ಲಿ ಚಿರ ಕಾಲ ಬಾಳಬಹುದಾದ ಪಾತ್ರ. ಅವ್ಯವಸ್ಥಿತವಾದ ಮೂವತ್ತು ಮನೆಗಳಿಂದ ಕೂಡಿದ, ಯಾರಿಗೂ 'ಬರಾವು' ಗೊತ್ತಿಲ್ಲದ ಬೈಲಹಳ್ಳಿಯ ತೀರಸಾಮಾನ್ಯ ಜೀವನದಲ್ಲಿಯೂ ರಸಗಂಗೆಯನ್ನು ಹರಿಯಿಸಿದ ನಾಣಿ, ಅವನನ್ನು ನಿರ್ಮಿ ಸಿದ ಲೇಖಕರು- ಇವರು ಓದುಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಬೈಲಹಳ್ಳಿಯ ಸರ್ವೆ ನಡೆಯುತ್ತಿರುವ ಕಾಲದ ಉತ್ಸಾಹ, ಆಗ ಹಳ್ಳಿಗರಲ್ಲಿ ಉಂಟಾದ 'ನಾವೆಲ್ಲ ಒಂದೇ ಸಂಸಾರಕ್ಕೆ ಸೇರಿದವರು' ಎಂಬ ಭಾವನೆ, ಆಗ ದೊರೆತ ಅವರ ಅನುಭವ, ವಿಚಾರಗಳ ವಿಶಾಲತೆ-ಇವೆಲ್ಲ ಹಳ್ಳಿಯ ಜೀವನದ ಕನ್ನಡಿಯನ್ನು ಓದುಗರ ಎದುರಿಗೆ ಹಿಡಿಯುತ್ತಿವೆ. ಆಗಿನ ಅನುಭವಗಳನ್ನು ಲೇಖಕರು ದಿನಚರಿಯ ರೂಪದಲ್ಲಿ ಬರೆದಿದ್ದಾರೆ. ಆ ಅನುಭವಗಳು ಹಳ್ಳಿಗರ ಸಂಸ್ಕೃತಿಯ ಆಳವನ್ನು ತಿಳಿಯುವ ಸಾಧನ ಗಳೆಂದು ಲೇಖಕರು ಹೇಳುವ ಮಾತು ನಿಜವಾಗಿದೆ. ಮಾತು ಮಾತಿಗೆ

ಹೊರಬೀಳುವ ನಾಣಿಯ ಪದಗಳು ಹಾಸ್ಯದ ಬುದ್ಬುದ ತರಂಗಗಳನ್ನು ಎಬ್ಬಿಸುತ್ತಿವೆ. ಆತನು ದಿವಸಕ್ಕೆ ನೂರಾರು ಪ್ರಾಸಗಳನ್ನು ಸರಿಯಾಗಿಯೋ ತಪ್ಪಾಗಿಯೋ, ಅರ್ಥದೊಂದಿಗೋ ಅರ್ಥವಿಲ್ಲದೆಯೋ ಹೇಳುತ್ತಿದ್ದನು. ಸುಬ್ಬೇಗೌಡನ ಕತೆಗಳು, ಹಳ್ಳಿಗರ ವಿಚಿತ್ರ ನಂಬಿಕೆಗಳು, ಅವರ ಅನುಭವ, ವಿಚಾರಗಳ ಪಡಿನೆಳಲಾಗಿವೆ. ಸುಬ್ಬೇಗೌಡನು ತಮ್ಮ ಅವ್ವನು ತನಗೆ ಹೇಳಿದ್ದ ಕತೆಗಳನ್ನೆಲ್ಲ ಬರೆದುಕೊಂಡಿದ್ದರೆ ಹತ್ತು ಮಹಾಭಾರತವಾಗಬಹುದಾಗಿತ್ತು, ಎಂದು ಹೇಳುವಲ್ಲಿ ಸ್ವಾರಸ್ಯವಿದೆ.

ಈ ಪುಸ್ತಕದಲ್ಲಿಯ ಒರಟು ರಂಗಸ್ವಾಮಿ, ಕುರಿ ತಿಮ್ಮ, ವೇಷ್ಟಿ ಕುಬ್ಜ, ಇಂಜಿನ್ ಯಾಲಕ್ಕಿ, ಫಾರೆನ್ ಕಂಟ್ರಿ, ಬ್ಲಾಕ್ ಬರ್ಡ್ ಮುಂತಾದ ವಿವಿಧ ಪಾತ್ರ ದರ್ಶನವು ತುಂಬ ಮಾರ್ಮಿಕವಾಗಿದೆ. "ತಂದಾನೋ ತಾನಾನಿ ತಾನು ತಾನಿ ತಂದಾನೋ ತಂದಾನೋ" ಎಂಬ ತಾನವನ್ನು ಉತ್ಸಾಹದಿಂದ ಹೇಳುವ ಹಳ್ಳಿಗರ ಕೋಲಾಟ "ತೇರಿಗ್ಹೋಗೋಣ ಬನ್ನಿರೋ ಸ್ವಾಮಿರಥಕ್ಹೋಗೋಣ ಬನ್ನಿರೋ" ಎಂದು ಸರಸವಾಗಿ ಪದ ಹೇಳುವ ರಥೋತ್ಸವದ ವರ್ಣನೆ, ಅವರ ಬೇಟೆಯ ಸಂಭ್ರಮ– ಇವೆಲ್ಲ ಅವರ ಶುಷ್ಕ ದಿನಚರಿಯಲ್ಲಿಯ ಸೊಗಸಿನ ಬುಗ್ಗೆಗಳಾಗಿವೆ. ಹಾಸ್ಯಲೋಲ ನಾಣಿಯ 'ಫಾಲ್ ಇನ್' ಹಾಗೂ 'ಲೆಫ್ಟ್ ರೈಟ್' ಇವು ಸರ್ವಗೆ ಹೆದರುತ್ತಿದ್ದ ಹಳ್ಳಿಗರನ್ನು ಹುರಿದುಂಬಿಸಿದವು. ಗಂಭೀರ ಸ್ವಭಾವದ, ಸ್ವಲ್ಪ ಜೋರಾದ ಆಸಾಮಿಯಾದ ಮೋಜಿಸಿದಾರನು ಕೂಡ ಸ್ವಲ್ಪ ದಿನಗಳಲ್ಲಿ ನಾಣಿಯ ಪ್ರಭಾವದಿಂದ ಸರಳ ಹಾಗೂ ರಸಿಕ ಮನುಷ್ಯನಾಗಿ ಮಾರ್ಪಡುತ್ತಾನೆ. ಆತನು ಹೊರಟು ಹೋದಮೇಲೆ ನಾಣಿಗೆ ಬರೆದಂತಿರುವ ಪತ್ರವು ಈ ಪುಸ್ತಕದ ತಿರುಳಿನಂತಿದೆ:

"ನನ್ನ ಇಪ್ಪತ್ತು ವರುಷದ ಅನುಭವದಲ್ಲಿ ನೂರಾರು ಗ್ರಾಮಗಳನ್ನು ನೋಡಿದ್ದೇನೆ; ಆಳಿದಿದ್ದೇನೆ. ಎಲ್ಲಾ ಕಡೆಯೂ ಒಂದೇ ಸಮ, ಒಂದೇ ಗೋಳು; ಒಂದೇ ದಾರಿದ್ರ್ಯ; ಒಂದೇ ಕೊಳಕು; ಅಜ್ಞಾನ, ಬೈಲಹಳ್ಳಿಯಲ್ಲಿಯೂ ಅದೇ ಅಜ್ಞಾನ; ಅದೇ ಗೋಳು. ಆದರೆ ನಿಮ್ಮ ಉತ್ಸಾಹದಿಂದ ಆ ಗೋಳು ಸ್ವಲ್ಪ ತಲೆ ತಗ್ಗಿಸಿತ್ತು. ಅಳುವುದಕ್ಕೆ ಸಾವಿರ ಕಾರಣಗಳಿದ್ದೂ ನಗುವುದಕ್ಕೆ ಒಂದು ಕಾರಣವಿದ್ದರೆ ಆ ಒಂದು ಕಾರಣವನ್ನು

ನೀವು ಬಲಪಡಿಸಿ ನಗುತ್ತಿದ್ದಿರಿ. **ನೋವು ಗೋಳುಗಳ ಹಿಂದೆ ಹೊಂಚು ಹಾಕುತ್ತಿರುವ ನಗೆಯನ್ನು ಹಿಡಿಯುವದೇ ಜೀವನದ ತಿರುಳು.** (ದಪ್ಪಕ್ಷರ ನಮ್ಮವು) ಅದೇ ನಮ್ಮ ಮುಂದಣ ಉತ್ಸಾಹಕ್ಕೆ ದಾರಿ. ಲೋಕವನ್ನು ಸೃಷ್ಟಿಸಿದ ಭಗವಂತನ ಗುರಿಯೂ ಅದೇ ಅಂತ ಕಾಣುತ್ತದೆ. ನೀವು ನನಗೆ ತೋರಿಸಿದ ದಾರಿಯನ್ನು ನಾನೆಂದೂ ಮರೆಯಲಾರೆ."

'ಬೈಲಹಳ್ಳಿ ಸರ್ವೆ'ಯನ್ನು ಓದಿ ಮುಗಿಸುವ ವಾಚಕರು ಮೋಜಿನಿದಾರನ ಈ ಮಾತುಗಳನ್ನು ಅಕ್ಷರಶಃ ಸಮರ್ಥಿಸಬೇಕಾಗುತ್ತದೆ. ಮೋಜಿನಿದಾರರು ಕೊನೆಗೆ ಹೇಳುವ "ನಾನೇನೋ ಈ ಪ್ರಯಾಣ, ನಿಮ್ಮೂರ ಈ ಪದಗಳು, ಆ ಕತೆಗಳು, ಸುಬ್ಬೇಗೌಡ, ಸಣ್ಣಪ್ಪ ಯಾರನ್ನೂ ಮರೆಯುವಂತೆ ಇಲ್ಲ" ಎಂಬ ಮಾತುಗಳನ್ನು ಓದುಗರೂ ಹೇಳದೆ ಇರಲಾರರು. ಶ್ರೀ. ಗೋರೂರರ ಸಾಹಿತ್ಯ ಪ್ರಪಂಚದಲ್ಲಿ ನಮಗೆ ದೊರೆಯುವ ನಾಣಿಯಂತಹವರ ಸಹವಾಸ ವಾಸ್ತವ ಪ್ರಪಂಚದಲ್ಲಿ ಯಾವಾಗಲೂ ದೊರೆಯಬಹುದಾದರೆ? ಎಂಬ ಆಳವಾದ ಆಶೆಯನ್ನು ಈ ಗ್ರಂಥವು ಹುಟ್ಟಿಸುತ್ತಿದೆ.

ಪುಸ್ತಕದ ಹೆಸರಿನಲ್ಲಿಯೇ ಇರುವ 'ಸರ್ವೆ' ಹಾಗೂ ಪುಸ್ತಕದ ತುಂಬ ಬರುವ ಪರಭಾಷೆಯ ಶಬ್ದಗಳು ಅನಿವಾರ್ಯವೇನೋ ಎಂದೆನಿಸುತ್ತಿದೆ.

'ಬೈಲಹಳ್ಳಿಯ ಸರ್ವೆ'ಯು ಹಳ್ಳಿಗರ ಸಂಸ್ಕೃತಿಯ ಕೈಪಿಡಿಯಾಗಿದೆ. ಗೋರೂರರ ಗ್ರಂಥಗಳಲ್ಲಿ ಚಿತ್ರಿತವಾದ ಹಳ್ಳಿಗರ ಭಾವ, ಭಾಷೆ, ವಿಚಾರ, ನಂಬಿಕೆ ಅನುಭವಗಳೂ ಹಾಗೂ ಸ್ವಭಾವ ನಿರೂಪಣ, ಹಾಸ್ಯದ ಬುಗ್ಗೆ ಇವುಗಳೂ ಆಧುನಿಕ ಕನ್ನಡ ಸಾಹಿತ್ಯಕ್ಕೆ ಉತ್ತಮ ಕಾಣಿಕೆಗಳಾಗಿವೆ.

## ೭. ಸಂಧ್ಯಾರಾಗ (ಶ್ರೀ. ಅ. ನ. ಕೃಷ್ಣರಾಯರು)

ಶ್ರೀ. ಅ. ನ. ಕೃಷ್ಣರಾಯರ ಸಾಮಾಜಿಕ ಕಾದಂಬರಿಯೆಂದೊಡನೆ ಅನೇಕರು ಇದರಲ್ಲಿ ಸಾಮಾಜಿಕ ಕೊಳಚೆಯ ನಿರ್ದಾಕ್ಷಿಣ್ಯ ನಿರೂಪಣೆಯಾಗಲಿ, ತೀವ್ರಗಾಮಿ ವಿಚಾರಗಳ ಪ್ರತಿಪಾದನೆಯಾಗಲಿ ಇರಬಹುದೆಂದು ತಿಳಿಯಬಹುದು. ಆದರೆ ಈ ಪುಸ್ತಕವನ್ನು ಓದಿದ ಮೇಲೆ ಅಂತಹ ಊಹೆ ತಪ್ಪೆಂದು ಕಂಡುಬರುವದು. ಈ ಸಾಮಾಜಿಕ ಕಾದಂಬರಿಯಲ್ಲಿ ಲೇಖಕರು ಯಾವುದನ್ನೂ ತೀಕ್ಷ್ಣವಾಗಿ ಹೇಳದೆ, ಎಲ್ಲವನ್ನೂ ಸೌಮ್ಯವಾಗಿ ನಿರೂಪಿಸಿದ್ದಾರೆ. 'ಗಾಯಕನು ಸಂಧ್ಯಾರಾಗದಲ್ಲಿ ತನ್ನ ಆತ್ಮಪ್ರಣತಿಯನ್ನು ತೇಲಿಬಿಟ್ಟ' ಹೃದಯಂಗಮ ಚಿತ್ರವೇ ಈ ಕಾದಂಬರಿಯ ವಸ್ತು. ಕಲಾವಿದನು ಜೀವನದ ಸಮಷ್ಟಿಯ ಕಡೆಗೆ ತಿರುಗುವ ಆದರ್ಶವೇ ಇಲ್ಲಿಯ ಕಥೆಯ ಪ್ರಚೋದನೆ. ಈ 'ಸಂಧ್ಯಾರಾಗ' ಜೀವನಕ್ಕೆ ದೂರವಾಗಿಲ್ಲ. ನಾವು ಸಾಮಾನ್ಯವಾಗಿ ಕಾಣುವ ವ್ಯಕ್ತಿಗಳನ್ನೇ ಚಿತ್ರಿಸಿ ಲೇಖಕರು ಒಂದು ಸುಂದರ ಕಲಾಕೃತಿಯನ್ನು ನಿರ್ಮಿಸಿದ್ದಾರೆ. ಈ ಕಾದಂಬರಿಯ ಎಲ್ಲ ಹಿನ್ನೆಲವು 'ಕನ್ನಡ' ಎಂದೆನಿಸುವಂತೆ ಸನ್ನಿವೇಶ, ದೃಶ್ಯ, ಘಟನೆ, ವ್ಯಕ್ತಿಗಳು ನಿರೂಪಿತವಾಗಿವೆ. ಕುಮಾರವ್ಯಾಸನ ಭಾರತ, ದಾಸರ ಹಾಡುಗಳು, ಶರಣರ ವಚನಗಳು, ಕರ್ನಾಟಕೀ ಗಾಯನ, ಕನ್ನಡ ಕಲಾವಿದರು, ತ್ಯಾಗಿಗಳು— ಇವರ ಸಂದರ್ಭಗಳು ಕಥೆಯಲ್ಲಿ ಅನೇಕ ಸಲ ಬರುತ್ತವೆ.

ಒಂದು ದೊಡ್ಡ ಕುಟುಂಬದ ಅನೇಕ ವ್ಯಕ್ತಿಗಳ ಬಹುಕಾಲದ ಪಾತ್ರಪೋಷಣೆ ಈ ಕಾದಂಬರಿಯಲ್ಲಿ ಬಂದಿದೆ. ಒಳ್ಳೆಯ ಕಾದಂಬರಿಯಿಂದ ನಾವು ಅಪೇಕ್ಷಿಸುವ ವಿಶಾಲಪಾತ್ರಪ್ರಪಂಚ ನಮಗೆ ಇಲ್ಲಿ ದೊರೆಯುತ್ತದೆ. ಉದಾತ್ತ ಜೀವಿಯಾದ ಮೀನಾಕ್ಷಮ್ಮನ ಪಾತ್ರವಂತೂ ಓದುಗರನ್ನು ಆನಂದದಿಂದ ತಣಿಸಿ, ಬಾಳಿಗೆ ಬೆಳಕನ್ನು ತಂದುಕೊಡುತ್ತದೆ. ಸ್ವಾರ್ಥಿಯಾದ ರಾಮಚಂದ್ರ, ಕಲಾಪ್ರೇಮಿಯಾದ ಲಕ್ಷ್ಮಣ ಈ ಎರಡು ಪಾತ್ರಗಳು ವಾಸ್ತವವಾಗಿ ಹಾಗೂ ಪರಿಣಾಮಕಾರಕವಾಗಿ ಚಿತ್ರಿಸಲ್ಪಟ್ಟಿವೆ. ಕುಟುಂಬದಲ್ಲಿಯ ಅಸಮಾಧಾನ ಹಾಗೂ ಅಸಂತೋಷಗಳು, ಹಳ್ಳಿಯ ಶುದ್ಧಜೀವನದ ಪ್ರವಾಹ, ಪಟ್ಟಣಗಳ

ನೈಸರ್ಗಿಕವಲ್ಲದ ಜೀವನ, ಹಾಗೂ ವಿದ್ಯೆಯ ಜಂಭ, ಕಲಾವಿದರ ಸರಳವೂ ಪವಿತ್ರವೂ ಆದ ಜೀವನ ಸಂಸ್ಕಾರ ಇವುಗಳ ನಿರೂಪಣೆಯಲ್ಲಿ ಶ್ರೀಮಾನ್ ಕೃಷ್ಣರಾಯರು ಒಳ್ಳೆಯ ಕೌಶಲ್ಯವನ್ನು ತೋರಿದ್ದಾರೆ. ಕೊನೆಯುವರೆಗೂ ಉತ್ಸಾಹವನ್ನು ಹೆಚ್ಚಿಸುವಂತಹ ಕಥನದರೀತಿ ಇಲ್ಲಿದೆ.

ನಿಜವಾದ ಕಲಾವಿದನು ಜನರ ಮೆಚ್ಚಿಗೆಗಾಗಿ ಆಶಿಸುವದಿಲ್ಲವೆಂದೂ ತನ್ನ ಆನಂದಕ್ಕಾಗಿ ತನ್ನ ಕಲೆಯ ಪ್ರದರ್ಶನ ಮಾಡುವನೆಂಬ ಮಾತನ್ನೂ ಲೇಖಕರು ಕಥಾನಾಯಕನಾದ ಲಕ್ಷ್ಮಣನಿಂದಲೇ ಹೇಳಿಸಿದ್ದಾರೆ. 'ಲಕ್ಷ್ಮಣನ ಕಲೆ ಧರ್ಮಮತಗಳನ್ನು ಮೀರಿತ್ತು. ತನ್ನ ಔನ್ನತ್ಯದಿಂದ ಅನಂತತೆಯಲ್ಲಿ ಶ್ರೇಷ್ಠ ಸ್ಥಾನವನ್ನು ದೊರಕಿಸಿಕೊಂಡಿತ್ತು' ಎಂದು ಲೇಖಕರು ಲಕ್ಷ್ಮಣನ ಕಲೆಯ ಸಂಬಂಧವಾಗಿ ಹೇಳಿದ ಮಾತು ಮನನೀಯವಾಗಿದೆ. ಶ್ರೀ. ಮಾಸ್ತಿಯವರ 'ಸುಬ್ಬಣ್ಣ'ನ ಕಲಾಪ್ರೇಮದೊಡನೆ ಲಕ್ಷ್ಮಣನ ಕಲಾಪ್ರೇಮವನ್ನು ಹೋಲಿಸಿ ನೋಡಬಹುದಾಗಿದೆ.

ಕಥಾವಸ್ತುವಿನ ರಚನೆಯಲ್ಲಿ ಬಿಗುವು, ಸುವ್ಯವಸ್ಥೆ ಕಂಡುಬರುತ್ತವೆ. ಆದ್ದರಿಂದ ಕಥೆಯು ಆಕರ್ಷಕವೂ ಆಗಿದೆ. ಏಕೆಂದರೆ, "Compactness and Symmetry -- a good plot well, worked out undoubtedly give aesthetic pleasure."

ಈ ಕಾದಂಬರಿಯಲ್ಲಿಯ ಮೀನಾಕ್ಷಮ್ಮನವರ ಪಾತ್ರವು ನಮ್ಮ ಸಾಹಿತ್ಯ ಕ್ಷೇತ್ರದಲ್ಲಿಯೇ ಉದಾತ್ತವಾದುದು. ಇಂತಹ ಪಾತ್ರಗಳ ಪರಿಚಯಕ್ಕಾಗಿಯೇ ನಾವು ಸಾಹಿತ್ಯವನ್ನು ಅಪೇಕ್ಷಿಸಬೇಕಾಗುವುದು. ಕಾದಂಬರಿಕಾರನ ವೈಶಿಷ್ಟ್ಯ, ಚಾತುರ್ಯ ಕಂಡುಬರುವುದು ಇಂತಹ ಪಾತ್ರರಚನೆಯಲ್ಲಿಯೇ ಎಂದು ಹೇಳಬೇಕು. "His men and women shall move through his pages like living beings remain in our memory after his book is laid aside and its details perhaps forgotten." ಎಂಬ ಸೂತ್ರದಿಂದ ನೋಡಿದರೆ ಶ್ರೀಮಾನ್ ಕೃಷ್ಣರಾಯರು ಹೆಚ್ಚಾಗಿ ಯಶಸ್ಸನ್ನು ಪಡೆದಿದ್ದಾರೆಂದೇ ಹೇಳಬೇಕು. ಹೊದಿಕೆಯ ಮೇಲಿನ ಚಿತ್ರ ಅರ್ಥಪೂರ್ಣವಾಗಿದೆ.

## ೮. ಕರ್ನಾಟಕ ದರ್ಶನ (ಸಂಕಲನ)

ಈ ಪುಸ್ತಕದಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದ ಹತ್ತು ಲೇಖಗಳಿವೆ. ಅವುಗಳನ್ನು ಬರೆದವರಲ್ಲಿ ಹೆಚ್ಚು ಜನರು ಸುರಿತ ಲೇಖಕರಾಗಿದ್ದು ಕನ್ನಡದ ಸಾಹಿತ್ಯ, ರಾಜಕೀಯ ಕ್ಷೇತ್ರಗಳಲ್ಲಿ ಹೆಸರು ಪಡೆದವರಾಗಿದ್ದಾರೆ. ಇಂಥವರ ವಿವಿಧ ಲೇಖನಗಳನ್ನೊಳಗೊಂಡ 'ಕರ್ನಾಟಕ ದರ್ಶನವು' ಒಂದು ಹುರುಳುಳ್ಳ ಗ್ರಂಥವೆಂದು ಬೇರೆ ಹೇಳಬೇಕಾಗಿಲ್ಲ.

ಬೇರೆಬೇರೆಯಾಗಿರುವ ಹತ್ತುಲೇಖನಗಳ ಗುಣದೋಷಗಳ ವಿಸ್ತೃತ ಚರ್ಚೆ ಇಲ್ಲಿ ಸಾಧ್ಯವಲ್ಲವಾದರೂ ಅವುಗಳ ವೈಶಿಷ್ಟ್ಯಗಳನ್ನು ಇಲ್ಲಿ ಸೂಚಿಸಬೇಕಾಗಿದೆ. ಗ್ರಂಥವು ಇಂದಿನ ಕನ್ನಡ ಹಿರಿಯರಲ್ಲಿ ಹಿರಿಯರಾದ ಶ್ರೀ. ಆಲೂರ ವೆಂಕಟರಾಯರ ಲೇಖನದಿಂದ ಮೊದಲಾಗಿದೆ. ೧೯೧೫ರ ಸುಮಾರಿಗೆ ಕನ್ನಡಿಗರನ್ನು ಎಚ್ಚರಿಸುವದಕ್ಕಾಗಿ "ಕರ್ನಾಟಕಾಂತರ್ಗತ ಭಾರತ ಮಾತೆಗೆ ನಮಸ್ಕಾರ" ಎಂದು ಸೂತ್ರರೂಪವಾಗಿ ಹೇಳಿದ ಮಾತನ್ನೇ ಮತ್ತೆ ವೆಂಕಟರಾಯರು ಇಲ್ಲಿ ವಿಶದವಾಗಿ ಹೇಳಿದ್ದಾರೆ. ಈ ಸೂತ್ರದಲ್ಲಿಯ ವೇದಾಂತದ ಪರಿಭಾಷೆಯನ್ನು ಬಿಟ್ಟುಕೊಟ್ಟು ಅರ್ಥವನ್ನು ಅವರ ಭಾಷೆಯಲ್ಲಿಯೇ ಹೀಗೆ ಹೇಳಬಹುದು:— "ಭರತಖಂಡದ ಉದ್ಧಾರಕ್ಕೆ ಕರ್ನಾಟಕವು ಜೀವದಿಂದ ಉಳಿಯುವದು ಅವಶ್ಯವಿರುತ್ತದೆ..... ಕರ್ನಾಟಕ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳದೆ ಭಾರತಸೇವೆಯನ್ನು ಮಾಡಲಿಕ್ಕೆ ಬರಲಾರದು— ಮಾಡಬಾರದು." ಈ ವಿಚಾರಜಾಗ್ರತಿ ಇಂದೂ ಕೂಡ– ಭಾರತದ ರಾಜಕೀಯ ಆಂದೋಲನ ನಡೆದಿರುವಾಗಲೂ—ಅವಶ್ಯವಾಗಿದೆ. ಕರ್ನಾಟಕದೊಡನೆ ಹದಿನಾರಾಣೆ ತಾದಾತ್ಮ್ಯ ಹೊಂದಿದವರೇ ಭಾರತದ ಸೇವೆಯನ್ನು ಯಥಾರ್ಥವಾಗಿ ಮಾಡಬಲ್ಲರಲ್ಲದೆ ಅರೆಕೊರೆ ಕರ್ನಾಟಕದವರು ಹಾಗೆ ಮಾಡಲಾರರು, ಎಂಬ ಎಚ್ಚರಿಕೆ ಸಮಯೋಚಿತವಾಗಿದೆ. ಇದೇ ಸಂದೇಶವನ್ನು ಇಂತಹದೇ ಎಚ್ಚರಿಕೆಯನ್ನು ತಮ್ಮ ವಿಶಿಷ್ಟ ಶೈಲಿಯಲ್ಲಿ ಕರ್ನಾಟಕದ ಹಿರಿಯರಾದ ಶ್ರೀ. ಮುದವೀಡು ಕೃಷ್ಣರಾಯರು "ಕರ್ನಾಟಕದ ರಾಜಕೀಯ ಜೀವನ" ಎಂಬ ಲೇಖನದಲ್ಲಿ ಕೊಟ್ಟಿದ್ದಾರೆ.

ಕರ್ನಾಟಕ ರಾಷ್ಟ್ರೀಯ ಜೀವನವು ವಿಕಾಸಹೊಂದಿದ ರೀತಿಯನ್ನು ಬಣ್ಣಿಸು ವದಕ್ಕೆ ಇಂದು ಅಧಿಕಾರಕ್ಕೆ ಸಂಪನ್ನರು ಕೃಷ್ಣರಾಯರೇ, ಎಂಬ ಮಾತಿಗೆ ಸಂದೇಹವಿರಲಾರದು. ಅವರ ಸೂಕ್ಷ್ಮನಿರೀಕ್ಷಣೆಯ ಫಲವಾದ ಘಟನೆ ಗಳ ಸಂಗ್ರಹ ಹಾಗೂ ನೈಜತೆ, ಅವರ ಬಿಚ್ಚುಗನ್ನಡ ಶೈಲಿಯ ಫಲವಾದ "ಮನಂಬುಗುವ" ಮಾತುಗಾರಿಕೆ ಇವುಗಳು ಈ ಲೇಖನದಲ್ಲಿವೆ. ಭಾರತಕ್ಕೆ ಸಂಯುಕ್ತರಾಜ್ಯ ಪದ್ಧತಿ ಬರಲಿರುವ ಕಾಲದಲ್ಲಿ ಕೃಷ್ಣರಾಯರ "ಹಿಂದೀ ರಾಷ್ಟ್ರದ ಘಟನೆಯಲ್ಲಿ, ಕರ್ನಾಟಕವೂ ಒಂದು ಸ್ವಯಂಸಮರ್ಥವಾದ, ಸ್ವಯಂಪೂರ್ಣವಾದ, ಸ್ವಯಂಪ್ರಕಾಶಿತವಾದ ಅಂಗರಾಷ್ಟ್ರವೇ ಉಳಿಯು ತಕ್ಕದ್ದು" ಎಂಬ ಮಾತನ್ನು ಅಲಕ್ಷಿಸುವಂತಿಲ್ಲ. ೧೯೨೦ಕ್ಕೆ ಈಚಿನ ಕರ್ನಾಟಕದ ರಾಷ್ಟ್ರೀಯ ಜೀವನವನ್ನು ಕುರಿತು ಆ ರಾಜಕೀಯ ಜೀವನ ದಲ್ಲಿ ಮುಖ್ಯ ಭಾಗ ವಹಿಸಿದ ಶ್ರೀ. ದ. ಪ. ಕರಮರಕರರು ಬರೆದಿದ್ದಾರೆ. ಅದು ಹೆಚ್ಚಾಗಿ ಹಿಂದುಸ್ತಾನದ ರಾಜಕೀಯ ಜೀವನದ ಚರಿತ್ರೆಯಾಗಿದ್ದು ಅಲ್ಲಲ್ಲಿ ಕರ್ನಾಟಕದ ಹೆಸರನ್ನೂ ಸೇರಿಸಿದಂತಿದೆ. ಭಾರತ ರಾಷ್ಟ್ರೀಯ ಜೀವನದ ಪಡಿನೆಳಲೇ ಕರ್ನಾಟಕದಲ್ಲಿರುವದರಿಂದ ಅದು ಅನಿವಾರ್ಯವೋ ಏನೋ ? ಇತ್ತೀಚಿನ ರಾಜಕೀಯ ಘಟನೆಗಳ ಇತಿಹಾಸ, ಕರ್ನಾಟಕವು ಸಲ್ಲಿಸಿದ ಕಾಣಿಕೆ ಇವುಗಳನ್ನು ಚೆನ್ನಾಗಿ ನಿರೂಪಿಸಲಾಗಿದೆ. ಈ ಎರಡು ಲೇಖನಗಳಲ್ಲಿ ಹಾಗೂ ಮುಂದಿನ "ಕರ್ನಾಟಕದ ಏಕೀಕರಣ" ಎಂಬ ಲೇಖನದಲ್ಲಿ ಕೆಲವು ಮಾತುಗಳಲ್ಲಿ ಪುನರುಕ್ತಿ ಕಂಡುಬರುತ್ತಿದೆ. ಶ್ರೀ. ಶ್ರೀನಿವಾಸರಾವ ಮಂಗಳವೇಢೆಯವರು ಅಧಿಕೃತ ವಸ್ತು ಸಂಖ್ಯೆಗಳ ಆಧಾರದೊಂದಿಗೆ ಏಕೀಕರಣದ ಪ್ರಶ್ನೆಯನ್ನು ಸಮರ್ಥಿಸಿದ್ದಾರೆ. ಹುರು ಳಿಲ್ಲದ ಆಕ್ಷೇಪಣೆಗಳನ್ನು ಖಂಡಿಸಿ ಏಕೀಕರಣದ ಬಗೆಗೆ ಉಪಯುಕ್ತ ಸಂಗತಿಗಳನ್ನು ಹೇಳಿದ್ದಾರೆ. "ನುಡಿಯು ನಾಡಿನ ಉಸಿರು. ಒಂದು ನಾಡಿನ ನುಡಿಗೆ ಅವಕಾಶವಿಲ್ಲದಂತೆ ಮಾಡುವದೆಂದರೆ.... ಆ ನಾಡಿನ ಪ್ರಾಣವನ್ನೇ ಹಿಂಡಿದ ಹಾಗೆ" ಎಂಬ ಮಾತು ಮನನೀಯವಾಗಿದೆ.

ಕರ್ನಾಟಕದ ಉದ್ಯೋಗಗಳ ಬಗೆಗೆ ಎಷ್ಟೋ ಸಂಗತಿಗಳನ್ನು ಕಲೆಹಾಕಿ ಪ್ರೊ. ಯಲಬುರ್ಗಿ ಅವರು ಒಂದು ಲೇಖವನನ್ನು ಬರೆದಿದ್ದಾರೆ ಇದರಲ್ಲಿ ಕರ್ನಾಟಕವು ಕೈಕೊಳ್ಳಬಹುದಾದ, ಉದ್ಯೋಗಗಳ ಬಗೆಗೆ

ವ್ಯವಹಾರ್ಯ ಸೂಚನೆಗಳಿವೆ. ಕರ್ನಾಟಕದ ದರ್ಶನಕ್ಕೆ ಇಂತಹ ಬರೆಹಗಳೂ ಬೇಕು. ಇಂತಹ ಲೇಖನಗಳು ಶುಷ್ಕ ಯಾದಿಯಾಗಬಾರದು. ಭಾರತೀಯರಾದ ಕನ್ನಡಿಗರು ಎಂಬ ಲೇಖನವು ಕೂಡ "who is who" ಎಂಬ ಪ್ರಕಟನೆಯಂತೆ, ಜೀವನದಲ್ಲಿಯ ಘಟನೆಗಳ ಯಾದಿಯಾದಂತಿದೆ. ಅಖಿಲ ಭಾರತೀಯರಲ್ಲಿ ಗಣಿಸಲ್ಪಡುವ ಕನ್ನಡಿಗರ "ದರ್ಶನ"ವು ಉಪಯುಕ್ತವೇ ಆದರೂ ಇನ್ನೂ ಕೆಲವು ಹೆಸರುಗಳನ್ನು ಇಲ್ಲಿ ಸೇರಿಸಬಹುದಾಗಿತ್ತು.

ಈ ಗ್ರಂಥದಲ್ಲಿ ಕನ್ನಡ ಸಾಹಿತ್ಯದ ಬಗೆಗೆ ಮೂರು ಲೇಖನಗಳಿವೆ. 'ಆನಂದಕಂದ'ರು ಸಣ್ಣಕತೆ ಕಾದಂಬರಿಗಳನ್ನು ಕುರಿತು. ಶ್ರೀರಂಗರು ನಮ್ಮ ನಾಟಕಗಳನ್ನು ಕುರಿತು ಬರೆದಿದ್ದಾರೆ. ಇವುಗಳಿಂದ ಹಾಗೂ ಶ್ರೀ ಬೇಂದ್ರೆ ಅವರ ಲೇಖನದಿಂದ ಆಧುನಿಕ ಕನ್ನಡ ಸಾಹಿತ್ಯದ ಸಂಕ್ಷಿಪ್ತವಾದರೂ ಸ್ಫುಟವಾದ ದರ್ಶನವಾಗುತ್ತದೆ. ಆನಂದಕಂದರ ಲಲಿತ ಸಾಹಿತ್ಯದ ವ್ಯಾಖ್ಯೆ ವ್ಯಾಪ್ತಿ ಹಾಗೂ ಪ್ರಾಚೀನ ಕರ್ನಾಟಕದ ನಾಟಕಗಳ ಮಾದರಿಯ ಸಂಬಂಧವಾಗಿ ಶ್ರೀರಂಗರ ತರ್ಕ ಮತ್ತು 'ಸ್ತ್ರೀಧರ್ಮ ರಹಸ್ಯ' ಮೊದಲಾದ ನಾಟಕಗಳು ಇಂಥ ಜೀವನವನ್ನೇ ಅನುಸರಿಸಿ ಬರೆದವುಗಳು, ಎಂಬ ಮಾತಿನ ಬಗೆಗೆ ಭಿನ್ನಾಭಿಪ್ರಾಯಗಳು ಉಂಟಾಗಬಹುದು. ಹೀಗಿದ್ದರೂ ಕೂಡ ಕನ್ನಡ ಕಾದಂಬರಿ, ಸಣ್ಣಕತೆ, ನಾಟಕಗಳು ಕನ್ನಡದಲ್ಲಿ ಬೆಳೆದ ಒಂದು ರೀತಿಯನ್ನು ನಾವಿಲ್ಲಿ ಕಾಣಬಹುದು ಶ್ರೀರಂಗರ ಲೇಖನವು ವಾಡಿಕೆಯಂತೆ ಸ್ವತಂತ್ರ ವಿಚಾರಗಳನ್ನೊಳಗೊಂಡಿದೆ. ಪ್ರಾಚೀನ ಕರ್ನಾಟಕದಲ್ಲಿ ನಾಟಕಗಳ ಅಭಾವಕ್ಕೆ ಅವರು ಹೇಳುವ ಕಾರಣಗಳು, ಆಧುನಿಕ ನಾಟಕಗಳ ಬೆಳವಣಿಗೆ (ಅದು ಸಂಪೂರ್ಣವಾಗಿರಲಿಕ್ಕಿಲ್ಲ) ಇವು ಮಾರ್ಮಿಕವಾಗಿವೆ. "ಇಂದಿನ ವಾಙ್ಮಯದ ಹಾದಿಯನ್ನು ಕುರಿತು ಶ್ರೀ. ಬೇಂದ್ರೆ ಅವರು ಬರೆದ್ದಾರೆ. ಅದರಲ್ಲಿ ಅವರು ಆಧುನಿಕ ಕನ್ನಡ ಸಾಹಿತ್ಯದ ದಿಗ್ದರ್ಶನವನ್ನು ವಿಮರ್ಶಕ ದೃಷ್ಟಿಯಿಂದ ಮಾಡಿದ್ದಾರೆ. ಕಿರಿದು ಮಾತುಗಳಲ್ಲಿ ಹಿರಿದು ಅರ್ಥವನ್ನು ತುಂಬುವ ಶ್ರೀ ಬೇಂದ್ರೆಯವರ ಇತ್ತೀಚಿನ ಶೈಲಿಯು ಕನ್ನಡಕ್ಕೆ ಬೆಲೆಯನ್ನು ತಂದುಕೊಡುತ್ತದೆ. ವಿಚಾರಪರಿಪ್ಲುತ ನಿರೂಪಣೆಯುಳ್ಳ ಈ ಲೇಖನವು ಇಡಿಯ ಸಂಗ್ರಹದಲ್ಲಿ ಉತ್ಕೃಷ್ಟವೆಂದು ಹೇಳಬಹುದು. ಗದ್ಯದ ಬೆಳವಣಿಗೆಯ

ವೈವಿಧ್ಯ ನಮ್ಮ ಸಾಹಿತ್ಯವು ಮುಂದೆ ಹಿಡಿಯಬೇಕಾಗಿರುವ ಮಾರ್ಗ ಇವುಗಳು ವಿಶೇಷ ಕುಶಲತನದಿಂದ ಬರೆಯಲ್ಪಟ್ಟಿವೆ.

ಈ ಸಂಗ್ರಹದಲ್ಲಿ ಇನ್ನುಳಿದ ಒಂದು ಲೇಖನವೆಂದರೆ, ಶ್ರೀ. ಶಂ. ಬಾ. ಜೋಶಿ ಅವರದು. ಅವರ " ನಮ್ಮ ನಾಡಿನ ಜಾತಿ ಜನಾಂಗಗಳು " ಎಂಬ ಲೇಖನವು ಕರ್ನಾಟಕದ ಹಿತದ ದೃಷ್ಟಿಯಿಂದ ಮಹತ್ವದ್ದಾಗಿದೆ ಜಾತಿ, ಜನಾಂಗಗಳ ಹೆಮ್ಮೆ ಇಟ್ಟುಕೊಳ್ಳುವದು ಹುರುಳಿಲ್ಲದ ಮಾತೆಂಬುದನ್ನು ಶ್ರೀ. ಜೋಶಿ ಅವರು ಸೋದಾಹರಣವಾಗಿ ವಿವರಿಸಿದ್ದಾರೆ. " ನಮ್ಮ ಧರ್ಮ ವೈಯಕ್ತಿಕವಾಗಿರಬೇಕು; ಭಾಷೆ ಪ್ರಾದೇಶಿಕವಾಗಬೇಕು; ಜಾತಿ ಮಾನವನದಾಗಿರಬೇಕು" ಎಂಬ ಹುರುಳುಳ್ಳ ಸಂದೇಶವನ್ನು ಎಲ್ಲರೂ ಗಮನಿಸಬೇಕಾಗಿದೆ.

ಇದುವರೆಗಿನ ವಿವೇಚನೆಯಿಂದ 'ಕರ್ನಾಟಕದರ್ಶನ'ವು ಉಪಯುಕ್ತ ಲೇಖನಗಳ ಸಂಗ್ರಹವೆಂದು ಕಂಡುಬರುತ್ತದೆ. ಆದರೆ ಕರ್ನಾಟಕ **ದರ್ಶನದ** ದೃಷ್ಟಿಯಿಂದ ಈ ಸಂಗ್ರಹವು ಪರಿಪೂರ್ಣವಾಗಿಲ್ಲ. ಕರ್ನಾಟಕದ ದರ್ಶನವನ್ನು ಇನ್ನೂ ಕೆಲವು ಮುಖಗಳಿಂದ ಮಾಡಬೇಕಾಗುತ್ತದೆ. ಕರ್ನಾಟಕದಲ್ಲಿ ವಿದ್ಯಾಪ್ರಸಾರ, ಸಂಘಸಂಸ್ಥೆಗಳು ಇತ್ಯಾದಿ ವಿಷಯಗಳ ನಿರೂಪಣೆಯು ಇಲ್ಲಿಲ್ಲ. ಇಡಿಯ ದರ್ಶನವು ಈ ಪುಸ್ತಕದ ಗಾತ್ರಕ್ಕೆ ಸಾಧ್ಯವಿಲ್ಲವಾದರೆ ವಿಭಾಗಗಳಾಗಿ ಅದನ್ನು ಕೊನೆಗಾಣಿಸಬಹುದು. '' ಅಖಂಡ ಕರ್ನಾಟಕದ ದೃಷ್ಟಿಯಿಂದ" ಎಂದು ಸಂಪಾದಕರು ಮೊದಲಿಗೆ ಹೇಳಿದ್ದರೂ ಕೂಡ ವಿಷಯಗಳಲ್ಲಾಗಲಿ ಲೇಖಕರಲ್ಲಾಗಲಿ ಇನ್ನುಳಿದ ಕರ್ನಾಟಕದ ಭಾಗಗಳನ್ನು ಬಿಟ್ಟಂತಾಗಿ ಇಲ್ಲಿ ಅಖಿಲ ಕರ್ನಾಟಕ ದೃಷ್ಟಿಯ ಅಭಾವವಿದೆಯೆಂದು ಒಪ್ಪಬೇಕಾಗುತ್ತದೆ. ಅಲ್ಲದೆ, ವಿಚಾರ ಜಾಗ್ರತಿ, ದರ್ಶನ ಇವುಗಳೇ ಉದ್ದೇಶವಾಗಿರುವ ಇಂತಹ ಪುಸ್ತಕಗಳಲ್ಲಿ ವ್ಯಕ್ತಿಗಳ ಸ್ತುತಿ ನಿಂದೆಗಳು ಸೇರಿರುವದೂ ಸರಿಯಲ್ಲ.

ಪುಸ್ತಕದ ಅಚ್ಚುಕಟ್ಟು ಸುಂದರವಾಗಿದೆ. ಆದರೆ ಕೆಲವು ಮುದ್ರಣ ದೋಷಗಳು ನುಸುಳಿಕೊಂಡಿವೆ. ಶ್ರೀ. ಬುರ್ಲಿಯವರ ಸಾಹಸ, ಉತ್ಕಟ ಕನ್ನಡಾಭಿಮಾನ, ಇವುಗಳ ಫಲವಾದ 'ಕರ್ನಾಟಕ ದರ್ಶನವು' ಆಧುನಿಕ ಕನ್ನಡ ಸಾಹಿತ್ಯದ ಚಟುವಟಿಕೆಗಳಲ್ಲಿ ಹೊಸದೊಂದು ದಾರಿಯಾಗಿದೆ.

## ೯. ಹಳ್ಳಿಯ ಬಾಳು (ಗೊರೂರು ರಾಮಸ್ವಾಮಿ ಅಯ್ಯಂಗಾರ)

ಹಳ್ಳಿಯ ಬಾಳಿನ ಸೊಗಸನ್ನು ಮಾರ್ಮಿಕವಾಗಿ ಚಿತ್ರಿಸುವದರಲ್ಲಿ ಶ್ರೀಮಾನ್ ಗೊರೂರ ಅವರು ಹೆಸರಾಗಿದ್ದಾರೆ. ಹೊಸಗನ್ನಡ ಲೇಖಕರಲ್ಲಿ ಅವರಿಗೊಂದು ವಿಶಿಷ್ಟ ಸ್ಥಾನವಿದೆ. ‘ ಹಳ್ಳಿಯ ಚಿತ್ರಗಳು ’ ‘ ನಮ್ಮೂರಿನ ರಸಿಕರು ’ ಬೈಲು ಹಳ್ಳಿ ಸರ್ವೆ ’ ಎಂಬ ಗ್ರಂಥಗಳಲ್ಲಿ ಅವರು ಗ್ರಾಮಜೀವನದ ಚಿತ್ರಗಳನ್ನು ಕತೆಗಳಾಗಿ ಹೆಣೆದಿದ್ದಾರೆ. ಪ್ರಸ್ತುತ ಗ್ರಂಥವು ಹಳ್ಳಿಗರ ಸಂಸ್ಕೃತಿಯನ್ನು ಕುರಿತು ಒಂದು ಪ್ರಬಂಧವಾಗಿದೆ. ಶ್ರೀಮಾನ್ ಗೊರೂರು ಅವರು ಈ ಮೊದಲೇ (ಶ್ರೀ. ಬಿ. ಎನ್. ರಂಗಸ್ವಾಮಿಯವರ ಸಹಕಾರದೊಂದಿಗೆ) ‘ ಹಳ್ಳಿಗರ ಹಾಡು ’ ಗಳನ್ನು ಸಂಗ್ರಹಿಸಿ ಆ ಪ್ರಕಟನೆಯ ಮುನ್ನುಡಿಯಲ್ಲಿ ರೈತನ ಸಂಸ್ಕೃತಿಯ ವೈಶಿಷ್ಟ್ಯವನ್ನು ಸಂಗ್ರಹವಾಗಿ ಚರ್ಚಿಸಿದ್ದರು. ಈ ‘ ಹಳ್ಳಿಯ ಬಾಳು ’ ಆ ‘ ಹಳ್ಳಿಯ ಹಾಡು ’ ಎಂಬ ಸಂಗ್ರಹದ ಭಾಷ್ಯವಿದ್ದಂತೆ ಇದೆ. ಅಲ್ಲದೆ ಆ ಮುನ್ನುಡಿಯಲ್ಲಿಯ ಕೆಲವು ವಿಚಾರಗಳನ್ನು, ಒಂದು ದೀರ್ಘ ಅವತರಣಿಕೆಯನ್ನು ಒಳಗೊಂಡಿದೆ. ಬಾಳನ್ನು ಬಾಳುವದರಲ್ಲೂ ಕಷ್ಟಗಳಿಗೆ ಕೆಚ್ಚೆದೆಯನ್ನು ಒಡ್ಡಿ ಸಹಿಸಿ ಜಯಿಸುವದರಲ್ಲಿಯೂ ಪ್ರಕೃತಿ ಸೌಂದರ್ಯವನ್ನು ಸವಿಯುವದರಲ್ಲಿಯೂ ಕಾವ್ಯವನ್ನು ಸೃಷ್ಟಿಸುವದರಲ್ಲಿಯೂ ಅವನು (ರೈತನು) ಯಾರಿಗೂ ಕಡಿಮೆ ಅಲ್ಲ. ” ಈ ಉಕ್ತಿಯು ಗ್ರಂಥದ ತಿರುಳಿನಂತಿದೆ. ಅದಕ್ಕಾಗಿಯೋ ಏನೋ ಇದೇ ಉಕ್ತಿ ಈ ಗ್ರಂಥದಲ್ಲಿ ಒಂದಕ್ಕಿಂತ ಹೆಚ್ಚು ಸಲ ಬಂದಿದೆ. (ಪುಟ ೩ ಹಾಗೂ ೯೨) “ ಆದರೆ ಅವನಿಗೆ ಅದಕ್ಕೆ ಒಂದು ಸಹಾನುಭೂತಿ, ಸ್ನೇಹ ವಾತಾವರಣ ಬೇಕು” ಎಂಬುದು ಈ ಗ್ರಂಥದ ಸಂದೇಶವಾಗಿದೆ.

ಈ ಗ್ರಂಥದಲ್ಲಿ ರೈತನ ಕಷ್ಟದ ದುಡಿಮೆ, ಆತನ ಸಂಸಾರದ ಚಿತ್ರ, ದೇವರೊಡನೆ ಆತನ ಸಾಮಿಪ್ಯ, ಆತನ ಸುಗ್ಗಿಯ ಸಂಭ್ರಮ, ಆತನಿಂದ ಕಾಳು ಪಡೆಯುವ ವಿವಿಧ ವೃತ್ತಿಯವರು—ಈ ವಿಷಯಗಳನ್ನು ವಿವೇಚಿಸಿ, ಕೊನೆಗೆ ಜನಪದ ಸಾಹಿತ್ಯದ ಸವಿಯನ್ನು ತೋರಿಸಲಾಗಿದೆ.

‘ ಲೋಕದ ಬಂಧು ’ ವಾದ ರೈತನ ಕಣದಲ್ಲಿ ರಾಶಿ ನಡೆದಿರುವಾಗ ಶ್ಯಾನುಭಾಗರು, ಪಟೇಲರು, ಜೋಯಿಸರು, “ ಮೇಟರು ” ಪೂಜಾರಿ,

ಶೇಕದಾರ, ಹಾವಾಡಿಗ, ದೊಂಬ, ಅಗಸ ಹಜಾಮ, ಮಂದೆ ಕುರಿಯವ, ಹಂದಿ ಚೇಕ, ಉಳ್ಳ ಹಾಕುವವನು, ಚಿತ್ರಗೊಂಬೆ, ಪುತ್ಲಿಗೊಂಬೆ 'ಮೀರಾಸೆ' ಗೆ (ಉತ್ತರ ಕರ್ನಾಟಕದಲ್ಲಿ 'ಆಯ' ಎಂಬ ಪದ ರೂಢಿಯಲ್ಲಿದೆ) ಬರುತ್ತಾರೆ. ಇವರಲ್ಲದೆ ಮಹಾರಾಷ್ಟ್ರದ ಬುರಡೆ ಬೆಸ್ತರು, ಉತ್ತರ ಕರ್ನಾಟಕದ 'ಜೋಗವ್ವ' ಗಳು ಬೊಂಬಾಯಿ ತನಾಷೆಯವರು ಇವರೂ ಮೈಸೂರಿನ ಹಳ್ಳಿಗಳಿಗೆ ನುಗ್ಗುವದುಂಟು. ಇವರೆಲ್ಲರ ಮೆರವಣಿಗೆಯನ್ನು ಗ್ರಂಥಕರ್ತರು ನಮಗೆ ತೋರಿಸಿದ್ದಾರೆ.

ರೈತನು ಪೂಜಿಸುವ ಅಸಂಖ್ಯ ದೇವತೆಗಳನ್ನೂ ಇಲ್ಲಿ ಸೂಚಿಸಲಾಗಿದೆ. ಆಂಜನೇಯ, ತಿರುಪತಿಯ ತಿಮ್ಮಪ್ಪ, ಬಿಳಿಗಿರಿ ರಂಗ, ಮಾದೇಶ್ವರ ಇಂತಹ ಮಹತ್ತರ ದೇವರಲ್ಲದೆ ಚಿಲ್ಲರೆ ದೇವತೆಗಳೆಷ್ಟೋ ಉಂಟು. "ಅವು ಚಿಲ್ಲರೆ ದೇವರು. ತಾಲೂಕು ಕಛೇರಿಯ ಅಧಿಕಾರಿಗಳಂತೆ, ಅವನಿಗೆ (ರೈತನಿಗೆ) ಕಿರುಕುಳವನ್ನು ಕೊಡುತ್ತವೆ. ಅದಕ್ಕಾಗಿ ಅವನು ಆ ದೇವರುಗಳಿಗೆ ಧೂಪ ಹಾಕಿ ಅವುಗಳನ್ನು ಪ್ರಸನ್ನವಾಗಿ ಇಟ್ಟುಕೊಳ್ಳುತ್ತಾನೆ. ಅವುಗಳ ಕೆಲಸ ಮುಗಿದ ಕೂಡಲೆ ಕಿತ್ತು ಒಗೆಯುತ್ತಾನೆ." ರೈತನು ಅಸಂಖ್ಯ ದೇವರಿಗೆ ಕೈ ಮುಗಿಯುವದಕ್ಕೆ ಸೂಚಿಸಿದ ಈ ಕಾರಣವು ಸರಿಯಾಗಿದೆ. 'ರೈತನ ದೇವರು ಬರಿಯ ಆಧ್ಯಾತ್ಮದ ತರ್ಕದ ಮುದ್ದೆಯಲ್ಲ. ಅವನು ಕೈಕಾಲುಗಳ ಸ್ವಾಮಿ." ಅಂತೆಯೇ ರೈತನು ದೇವರಲ್ಲಿಯೂ ಸಾಮಾನ್ಯರಂತೆ ಮದುವೆಯ ಹುಚ್ಚನ್ನೂ, ಕದ್ದು ಸೂಳೆಯರ ಹತ್ತಿರ ಹೋಗುವ ಅನೀತಿಯನ್ನು ಕಾಣುತ್ತಾನೆ. 'ಮಲ್ಲಯ್ಯ—ಗಿರಿಜೆ' 'ನಂಜುಂಡ-ಚಾಮುಂಡಿ' ಎಂಬ ಜನಪದ ಕಥನ ಗೀತಗಳನ್ನು ಇಲ್ಲಿ ಕೊಡಲಾಗಿದೆ. ಅವುಗಳಲ್ಲಿಯ ಕಥನ-ರೀತಿ, ಭಾವ, ಸನ್ನಿವೇಶಗಳಲ್ಲಿ ಸಹಜತೆಯಿದೆ; ಸೊಬಗಿದೆ. ಅರಮನೆಯನ್ನು ಸೇರಿದರೂ ಗಿರಿಜೆಗೆ ಬೀಸುವುದು, ಕುಟ್ಟುವುದು ತಪ್ಪುವುದಿಲ್ಲ ಅಂತೂ ದೇವರ ಸಂಸಾರವೂ ರೈತನ ಸಂಸಾರದಂತೆ, ಎಂಬುದನ್ನು ಶ್ರೀ. ಗೊರೂರು ಅವರು ತೋರಿಸಿ ಕೊಟ್ಟಿದ್ದಾರೆ.

'ಗಂಡ-ಹೆಂಡತಿ', 'ಪ್ರೇಮಸಂಸಾರ' ಎಂಬ ಪ್ರಕರಣದಲ್ಲಿ ರೈತನ ದಾಂಪತ್ಯ ಜೀವನದ ಚಿತ್ರವಿದೆ. ರೈತನ ರಸಿಕತೆಯನ್ನು ಇಲ್ಲಿ ಬಣ್ಣಿಸಲಾಗಿದೆ. ಗಂಡ ಹೆಂಡಿರ ನಲ್ಮೆಯನ್ನು, ಸಂಸಾರದಲ್ಲಿಯ ವಿರಸವನ್ನು, ತವರು

ಮನೆಯ ಸೊಗಸನ್ನು, ಅತ್ತೆ ನಾದಿನಿಯರ ಕಾಟವನ್ನು, ಅಕ್ಕ ತಂಗಿಯರ ವಾತ್ಸಲ್ಯವನ್ನು, ಮಕ್ಕಳ ಹಂಬಲವನ್ನು, ವಿಧವೆಯ ನರಕವನ್ನು ಒಂದೊಂದಾಗಿ ಜನಪದ ಸಾಹಿತ್ಯದಿಂದ ಇಲ್ಲಿ ಎತ್ತಿ ಕೊಡಲಾಗಿದೆ. 'ಗರತಿಯ ಹಾಡು' ಎಂಬ ಸಂಗ್ರಹದ ಕೆಲವು ಭಾಗಗಳನ್ನು 'ಹಳ್ಳಿಯ ಹಾಡುಗಳು' ಎಂಬ ಸಂಗ್ರಹದ 'ಸಂಸಾರ' ಎಂಬ ವಿಭಾಗವನ್ನು ಆಧಾರವಾಗಿಟ್ಟು ಕೊಂಡು ಈ ಚಿತ್ರಗಳನ್ನು ಕೆತ್ತಿದಂತಿದೆ. ಈ ಭಾಗದಲ್ಲಿ ಹಾಗೂ ಜನಪದ ಸಾಹಿತ್ಯದ ಸೊಗಸನ್ನು ವಿವರಿಸುವಲ್ಲಿ ಜನಪದ ಸಾಹಿತ್ಯದ 'ಜೇನು ಸೋರುವ' ಹಾಗೂ ಮಾಣಿಕ್ಯದಂತಹ ಮಾತುಗಳನ್ನು ವಿಪುಲವಾಗಿ ಬಳಸಿ ಕೊಳ್ಳಲಾಗಿದೆ.

ಈ ಗ್ರಂಥದ ಬಹುಭಾಗವನ್ನು ಜನಪದ ಸಾಹಿತ್ಯದಿಂದಲೇ ಚಿತ್ರಿಸಲಾಗಿದೆ. ಇಂದಿನ ಜನಪದ ಜೀವನದಲ್ಲಿಯೂ ಆ ಚಿತ್ರ ಉಳಿದಿದೆಯೆ? ಶ್ರೀ. ಗೊರೂರು ಅವರು ಚಿತ್ರಿಸಿದ ಹಳ್ಳಿಯ ಬಾಳಿನ ಸೊಗಸು ಇಂದೂ ಹಳ್ಳಿಗಳಲ್ಲಿ ಕಂಡುಬರುವುದೆ? ಎಂಬ ಪ್ರಶ್ನೆಗಳು ನಮ್ಮನ್ನು ಎದುರಿಸುತ್ತವೆ. ಶ್ರೀ. ಗೊರೂರು ಅವರೇ ಬೇರೊಂದು ಕಡೆ (ಹಳ್ಳಿಯ ಹಾಡುಗಳ ಮುನ್ನುಡಿ) ಹೀಗೆ ಬರೆದಿದ್ದಾರೆ: "ಈಗ ನಮ್ಮ ಸೀಮೆಗೆ ಕವಿದಿರುವ ಮಂಕಿನ ಬಹುಭಾಗವು ಹಳ್ಳಿಗಳಿಗೆ ಸೇರಿಕೊಂಡಿದೆ. ರೈತನ ಜೀವನ ಪೂರ್ಣವಾಗಿ ಅಮುಕಿ ಹೋಗಿದೆ." ಇದರ ಪರಿಣಾಮ ಸ್ಪಷ್ಟವಾಗಿ ಇಂದು ಹಳ್ಳಿಗಳಲ್ಲಿ ಕಾಣುತ್ತಿದೆ. ಇಲೆಕ್ಶನ್ನುಗಳು, ಬಸ್ಸುಗಳು, ಹೊಟೆಲುಗಳು ಹಳ್ಳಿಗಳಿಗೆ ಬಂದಾಗಿನಿಂದ ಹಳ್ಳಿಗರ ಜೀವನದ ಮೊದಲಿನ ನೆಮ್ಮದಿ ಮಾಯವಾಗಿದೆ. 'ಬೆವರಿನ ಆಳು' ವೈಗಳ್ಳನಾಗಿದ್ದಾನೆ. ದಾರಿದ್ರ್ಯ, ಅಜ್ಞಾನ, ಪಕ್ಷ ಪಂಗಡಗಳು, ಮತ್ಸರ ಇವೇ ಮುಂತಾದ ಕಾರಣಗಳಿಂದ ಹಳ್ಳಿಗಳಲ್ಲಿ ತೋರುವ ವಿರಸವನ್ನೂ ಗಮನಿಸಿದಾಗ ಹಳ್ಳಿಗಳ 'ಸರ್ವೆ' ಪೂರ್ಣವಾಗಬಲ್ಲದು.

'ಮೀರಾಸೆ' 'ಕರಕು' ಎಂಬ ಪದಗಳು, 'ಮೀರಾಸೆ'ಗೆ ಬರುವ ಅನೇಕ ವ್ಯಕ್ತಿಗಳು ಅದರಂತೆ ಕೆಲವು ದೇವರ ಹೆಸರುಗಳು, ಜಾತ್ರೆಗಳ ಸ್ಥಳಗಳು ಉತ್ತರ ಕರ್ನಾಟಕದವರಿಗೆ ಅಪರಿಚಿತವಾಗಿವೆ ಅದಕ್ಕೆ ಕಾರಣವೆಂದರೆ ಗ್ರಂಥಕರ್ತರು ತಾವು ಚನ್ನಾಗಿ ಅರಿತ ಮೈಸೂರು ಸೀಮೆಯ ಹಳ್ಳಿಗಳ ಬಾಳನ್ನೇ ಇಲ್ಲಿ ಚಿತ್ರಿಸಿದ್ದಾರೆ. ಇಂತಹ ಪರಿಚಯವು ಕರ್ನಾಟಕದ ಇತರ

ಭಾಗದವರಿಗೆ ಆಗಬೇಕಾದುದು ಸರಿಯೇ. ಅದರಂತೆ ಕರ್ನಾಟಕದ ಇನ್ನಿತರ ಭಾಗಗಳ ಹಳ್ಳಿಗಳ ಬಾಳನ್ನು ಅಲ್ಲಲ್ಲಿಯ ಲೇಖಕರು ಚಿತ್ರಿಸಬೇಕಾದುದೂ ಆವಶ್ಯಕವಾಗಿದೆ.

ರೈತನ ಪ್ರಭಾವವನ್ನು ಚಿತ್ರಿಸುವಾಗ ಶ್ರೀ. ಗೊರೂರು ಅವರು ಹೇಳುವ ಕೆಲವು ಮಾತುಗಳು ಹೀಗಿವೆ :

' ಮನುಷ್ಯನ ಒಳ್ಳೆಯ ಸ್ವಭಾವದಲ್ಲಿ ಅವನ (ರೈತನ) ನಂಬಿಕೆ ಕೆಡುವದಿಲ್ಲ. ' ' ಯಾವ ಒಂದು ಬಗೆಯ ಶಿಸ್ತು ನಮ್ಮ ಪೂರ್ವಿಕರಲ್ಲಿ ಇದ್ದಿತೋ ಆ ಶಿಸ್ತು ರೈತನ ಜೀವನದಲ್ಲಿ ನಮಗೆ ಈಗಲೂ ಕಾಣುತ್ತಿದೆ. ಈ ಮಾತುಗಳನ್ನು ಈಗ ಸಂಪೂರ್ಣವಾಗಿ ಒಪ್ಪಲು ಬರುವಂತಿಲ್ಲವೆಂದು ತೋರುತ್ತದೆ.

ಹಳ್ಳಿಯ ಸಂಸ್ಕೃತಿಯ ಬಗೆಗೆ ಶ್ರೀ. ಗೊರೂರು ಅವರಿಗಿರುವ ಅಭಿಮಾನವನ್ನು ನಾವು ಮೆಚ್ಚಬಹುದು. ಆದರೆ ಪ್ರಗತಿಪರವಾದ ಇಂದಿನ ಜೀವನದಲ್ಲಿ ಹಳ್ಳಿಗರ ಸಂಸ್ಕೃತಿಯ ಮಟ್ಟಕ್ಕೇ ನಾವು ನಿಲ್ಲಬೇಕೇ ? ಎಂದು ಕೇಳದೆ ನಿರ್ವಾಹವಿಲ್ಲ. ಈ ದೃಷ್ಟಿಯಿಂದ ' ಕನ್ನಡ ಅಧ್ಯಾಪಕರು ಸಾರ್ವಜನಿಕ ಭಾಷಣಗಳಲ್ಲಿ ಇಂಗ್ಲಿಷಿನಿಂದ ಉದಾಹರಣೆ ತೆಗೆದುಕೊಳ್ಳುವುದು ' ದೊಡ್ಡ ಅಪರಾಧವಾಗಬಹುದೆ ?

ಶ್ರೀಮಾನ್ ಗೊರೂರು ಅವರು ಹಳ್ಳಿಗರ ಬಾಳನ್ನು ಸ್ವಂತವಾಗಿ ಕಂಡಿದ್ದಾರೆ; ಅನುಭವಿಸಿದ್ದಾರೆ. ಅವರ ರಸಿಕತೆಯನ್ನು ಗುರುತಿಸಿದ್ದಾರೆ. ಅವರ ಸಂಸ್ಕೃತಿಯನ್ನು ಮೆಚ್ಚಿದ್ದಾರೆ. ಅವರ ಸಾಹಿತ್ಯವನ್ನು ಅರಿತಿದ್ದಾರೆ. ಇವೆಲ್ಲಕ್ಕಿಂತ ಹೆಚ್ಚಾಗಿ ಅವರಲ್ಲಿ ಹಳ್ಳಿಗರ ಬಗೆಗೆ ಅಪಾರವಾದ ಸಹಾನುಭೂತಿಯಿದೆ. ಇವೆಲ್ಲವುಗಳ ಫಲವಾಗಿ ಅವರು ಹಳ್ಳಿಯ ಬಾಳಿನ ಸೊಗಸನ್ನು ಸರಿಯಾಗಿ ಚಿತ್ರಿಸಬಲ್ಲರು. ಅದಕ್ಕೆ ಬೇಕಾದ ಲೇಖನ ಕಲೆಯೂ ಅವರಿಗೆ ಸಾಧಿಸಿದೆ. ' ಹಳ್ಳಿಯ ಬಾಳು ' ಕಾವ್ಯಾಲಯದ ಪ್ರಕಟನೆಯೆಂದು ಹೇಳಿದರೆ ಆಕರ್ಷಕವಾಗಿದೆಯೆಂದು ಹೇಳಿದಂತೆಯೇ ಸರಿ.

## ೧೦. ವರ್ಧಾಯಾತ್ರೆ; ದೀಪಮಾಲೆ; ಪರ್ಣಕುಟಿ.

(ಸಿದ್ದವ್ವನಹಳ್ಳಿ ಕೃಷ್ಣಶರ್ಮ)

'ಹರಟೆಯ ಮಲ್ಲ' ರೆಂದು ಹೆಸರಾಗಿ, ವ್ಯಕ್ತಿಚಿತ್ರಗಳನ್ನು ಅರಳಿಸುವಲ್ಲಿ ಕುಶಲರಾಗಿ ಕನ್ನಡಕ್ಕೆ ಗಾಂಧೀ ಸಾಹಿತ್ಯವನ್ನು ನೀಡುತ್ತಿರುವ ಶ್ರೀ. ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಹೊಸಗನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸ್ಥಾನ ಗಳಿಸಿದ್ದಾರೆ. ಅವರು ೨೪-೧೧-೩೮ಕ್ಕೆ ವರ್ಧಾ ಯಾತ್ರೆಯನ್ನು ಆರಂಭಿಸಿ ೧೫-೧-೩೯ರಲ್ಲಿ ಮುಗಿಸಿದರು. ಅವರು ವರ್ಧಾಕ್ಕೆ ಹೋಗಿ ಅಲ್ಲಿಯ ಸನ್ನಿವೇಶ, ಅಲ್ಲಿ ವಾಸಿಸುವ ಜನ, ಬರಹೋಗುವ ಜನ, ಅವರ ವಿಚಾರಸರಣಿ, ದಿನಚರಿ, ಗಾಂಧಿಯವರ ನಿಕಟ ಪರಿಚಯ, ಕಾಂಗ್ರೆಸ್ ಮುಖಂಡರ ವ್ಯಕ್ತಿತ್ವ—ಇವುಗಳನ್ನು ಸೂಕ್ಷ್ಮವಾಗಿ ಅರಿತುಕೊಂಡರು. ಅದರ ಫಲವಾಗಿ ಅವರು 'ವರ್ಧಾಯಾತ್ರೆ' 'ದೀಪಮಾಲೆ' ಪರ್ಣಕುಟಿ ಎಂಬ ಮೂರು ಒಳ್ಳೆಯ ಗ್ರಂಥಗಳನ್ನು ಅನುಕ್ರಮವಾಗಿ ೧೯೩೯, ೧೯೪೦, ೧೯೪೧ರಲ್ಲಿ ಪ್ರಕಟಿಸಿದರು. ಈ ಮೂರು ಗ್ರಂಥಗಳಲ್ಲಿ ಒಂದು ಬಗೆಯ ಏಕಸೂತ್ರವಿದೆ. ಅದೆಂದರೆ ಕೃಷ್ಣಶರ್ಮರ ವರ್ಧಾಯಾತ್ರೆಯಿಂದ ಅವರ ಮನಸ್ಸಿನ ಮೇಲೆ ಉಂಟಾದ ಚಿತ್ರ. 'ವರ್ಧಾಯಾತ್ರೆ' ಯೇ ಇನ್ನಿಷ್ಟು ಅರಳಿ 'ಪರ್ಣಕುಟಿ' ಯಾಗಿದೆ. 'ದೀಪಮಾಲೆಯಲ್ಲಿ ವರ್ಧಾ ಯಾತ್ರೆಯ ಎರಡು ಚಿತ್ರಗಳೇ ಮತ್ತೆಬಂದಿವೆ.

ವರ್ಧಾವಾಸದಲ್ಲಿ ಕೃಷ್ಣಶರ್ಮರ ಮನಸ್ಸಿನ ಮೇಲೆ ಮೂಡಿದ ವಿಚಾರಗಳ, ಭಾವನೆಗಳ ಚಿತ್ರಗಳು 'ವರ್ಧಾಯಾತ್ರೆ' ಗ್ರಂಥದಲ್ಲಿವೆ. ಇದಲ್ಲದೆ ಆ ಗ್ರಂಥದಲ್ಲಿ ದಿನಚರಿಯಿದೆ; ವ್ಯಕ್ತಿಪರಿಚಯವಿದೆ; ವಿಮರ್ಶೆಯಿದೆ; ಹೈದರಾಬಾದ ಇದೆ; ಕೃಷ್ಣಶರ್ಮರೂ ಇದ್ದಾರೆ. ಅದೂ ಇದೂ ಎಲ್ಲವೂ ಅಲ್ಲಿರುವದರಿಂದ ಆ ಗ್ರಂಥದ ಶೈಲಿಯಲ್ಲಿ ಒಂದು ರೀತಿಯ ಬಿಗುವು ಕಂಡುಬರುವದಿಲ್ಲ. ಆದರೆ ಇದೇ ಕಾರಣಕ್ಕಾಗಿ ಗ್ರಂಥವು ಹೆಚ್ಚು ರುಚಿಕಟ್ಟೊ ಆಗಿರುವಂತೆ ತೋರುತ್ತದೆ. ಪುಸ್ತಕದ ಆರಂಭದಲ್ಲಿ ಕೊಂಚ ಪ್ರವಾಸ

ವರ್ಣನೆಯೂ ಇದೆ. ಮುಂದೆ ವರ್ಧಾದಲ್ಲಿಯ ವಿವಿಧ ವಸ್ತುಗಳು ವ್ಯಕ್ತಿಗಳ ಪ್ರದರ್ಶನವನ್ನು ಕೃಷ್ಣಶರ್ಮರು ಕುಶಲತನದಿಂದ ಹರಡಿದ್ದಾರೆ. ಮುನ್ನುಡಿಕಾರರೊಬ್ಬರು ಗಾಂಧಿಯುವರನ್ನು ಇಂದಿನ ಯುಗದೇವನೆಂದೂ 'ವರ್ಧಾ' ಇದನ್ನು ಆ ಯುಗದೇವನ ಮಠ–ಗುಡಿ–ಗುಹೆ–ಗುಡಿಸಲು ಎಂದೂ ಸೂಚಿಸಿ ಅದನ್ನು "ರಾಷ್ಟ್ರೀಯ ಭಾರತದ ನವದೆಹಲಿ ಎನ್ನಿ; ಕಾಶೀ ರಾಮೇಶ್ವರವೆನ್ನಿ; ಘಟಿಕಾಸ್ಥಾನವೆನ್ನಿ;........ ಅದು ಇಂದು ಮಹಾಕ್ಷೇತ್ರ" ಎಂದೂ ಹೇಳಿದ್ದಾರೆ.

ಈ ಪುಸ್ತಕದ ಬೇರೆ ಬೇರೆ ಪ್ರಕರಣಗಳಲ್ಲಿ ವರ್ಧಾದಲ್ಲಿಯ ವಿವಿಧ ಸಂಸ್ಥೆಗಳ ಚಿತ್ರಗಳಿವೆ—ಈ ಶಬ್ದ ಚಿತ್ರಗಳೊಂದಿಗೆ ಕೆಲವು ಛಾಯಾ ಚಿತ್ರಗಳೂ ಇವೆ. ಬಜಾಜವಾಡಿಯ ಬಜಾಜರ ಬಂಗಲೆ, ಮಗನವಾಡಿಯ ಗ್ರಾಮೋದ್ಯೋಗ ಸಂಸ್ಥೆ, ಸಂಗ್ರಹಾಲಯ, ವರ್ಧಾ ಶಿಕ್ಷಣ ಕ್ರಮದ ನಯೀ ತಾಲೀಮ್ ವಿದ್ಯಾಮಂದಿರ, ನಾಲವಾಡಿಯ ಖಾದೀಕೇಂದ್ರ, ಸೇಗಾಂವಿನ ಹಾದಿ, ಅಲ್ಲಿಯ ಆಶ್ರಮ—ಈ ಸ್ಥಳಗಳನ್ನು ಕೃಷ್ಣಶರ್ಮರು ರುಚಿಕಟ್ಟಾಗಿ ವರ್ಣಿಸಿದ್ದಾರೆ. ಇವುಗಳಲ್ಲದೆ ಗಾಂಧಿಯುವರ ದಿನಚರಿ, ಕಾಂಗ್ರೆಸ್ ವರ್ಕಿಂಗ ಕಮೀಟಿಯ ಸಭೆ, ಗಾಂಧೀಸೇವಾಸಂಘದ ನೀತಿ ಧೋರಣೆಗಳು, ರಾಜಕೋಟ ಸತ್ಯಾಗ್ರಹದ ಪೂರ್ವರಂಗ—ಇವುಗಳ ವಿವರಣೆಗಳೂ ವಿಮರ್ಶೆಯೂ ಇವೆ. ಗಾಂಧೀಜಿ, ಬಜಾಜ, ಮಹದೇವ ದೇಸಾಯಿ ಈ ಮೂರು ವ್ಯಕ್ತಿಚಿತ್ರಗಳು ಈ ಪುಸ್ತಕದಲ್ಲಿ ಬಂದಿವೆ. ಒಂದೊಂದು ಪ್ರಕರಣಗಳನ್ನು ತುಂಬಿರುವ ಈ ವ್ಯಕ್ತಿಚಿತ್ರಗಳಲ್ಲದೆ ಇನ್ನೂ ಎಷ್ಟೋ ಸಣ್ಣ ಸಣ್ಣ ವ್ಯಕ್ತಿಚಿತ್ರಗಳೂ ಇವೆ. ಎಣಿಸಿ ನೋಡಿದರೆ ವರ್ಧಾಯಾತ್ರೆ ಇಂತಹ ಮೂವತ್ತು ಚಿತ್ರಗಳನ್ನು ಒಳಗೊಂಡ ದೀಪಮಾಲೆಯಾಗಿರುವದು ಕಂಡುಬರುತ್ತದೆ. ಇಲ್ಲಿಯ ದೀಪಮಾಲೆಯಲ್ಲಿ ಸೂಚಿತವಾದ ವ್ಯಕ್ತಿಗಳನ್ನು ಲೇಖಕರು ಸಂದರ್ಭಾನುಸಾರವಾಗಿ ತರಲು ಪ್ರಯತ್ನಿಸಿದ್ದರೂ ಅವೆಲ್ಲ ಈ ಗ್ರಂಥದಲ್ಲಿ ಆವಶ್ಯಕವೇ? ಎಂಬ ಪ್ರಶ್ನೆ ಓದುಗರಲ್ಲಿ ಮೂಡದೆ ಇರಲಾರದು. ವರ್ಧಾಕ್ಕೆ ಬರಹೋಗುವ ವ್ಯಕ್ತಿಗಳಲ್ಲಿ ಅನೇಕರನ್ನು ಇಲ್ಲಿ ಸೂಚಿಸಲಾಗಿದೆ. ಔಂಧದ ಮಹಾರಾಜರು ಅಮೇರಿಕೆಯ ಡಾ. Boyd ಇತ್ಯಾದಿ ವ್ಯಕ್ತಿಗಳ ಪರಿಚಯಗಳು ಇಲ್ಲಿ ಬಂದಿವೆ. ಅಲ್ಲದೆ ಬೆಳ್ಳಾವೆ ವೆಂಕಟನಾರಾಯಣಪ್ಪನವರ ನಡಿಗೆಯ ರೀತಿ,

ಉತ್ಕಲದ ಇತಿಹಾಸ, ಅನೇಕ ಕಥೆ ದೃಷ್ಟಾಂತಗಳು, ಕಾಗದ ಮಾಡುವ ವಿದ್ಯೆ, ಮೈಸೂರು ಚರ್ಮದ ಉದ್ಯೋಗವನ್ನು ಕೈಕೊಳ್ಳಬೇಕೆಂಬ ಸೂಚನೆ, ಕನಕದಾಸರ ಕಥೆ-ಲೇಖಕರಿಗೆ ದೊರೆತ ಅಖಿಲ ' ಕರ್ನಾಟಕ ನಾಗರಿಕತೆಯ ಸರ್ಟಿಫಿಕೇಟು ಹೀಗೆ ಎಷ್ಟೋ ವಿಷಯಗಳು ಇಲ್ಲಿವೆ. ಹೈದರಾಬಾದವಂತೂ ಆಗಾಗ ಹಣಕಿಕ್ಕುತ್ತಲೇ ಇರುತ್ತದೆ. ಅನೇಕ ವಿಷಯಗಳನ್ನು ಹೇಳಬೇಕೆಂಬ ಲೇಖಕರ ಈ ಹಂಬಲವು ಈ ಗ್ರಂಥದ ಗುಣವೂ ಅಹುದು; ದೋಷವೂ ಅಹುದು. ಅನೇಕ ಸ್ವಾರಸ್ಯಕರ ಸಂಗತಿಗಳು ಓದುಗರಿಗೆ ದೊರೆಯುತ್ತಿವೆ. ಆದರಿಂದ ಪುಸ್ತಕದ ಸುವ್ಯವಸ್ಥಿತವಾದ ಹೊಂದಿಕೆಗೆ ತೊಡಕೂ ಉಂಟಾಗುತ್ತದೆ. ಆದರೆ ' ವರ್ಧಾಯಾತ್ರೆ ' ಹೊಸ ಬಗೆಯ ಗ್ರಂಥ. ಸ್ವಾರಸ್ಯಕರವಾದ ಸಂಗತಿಗಳ ಮಾರ್ಮಿಕ ನಿರೂಪಣೆಯುಳ್ಳ ಪುಸ್ತಕ. ವ್ಯಕ್ತಿಚಿತ್ರಗಳನ್ನು ಬರೆಯುವದರಲ್ಲಿ ಪಳಗಿದ ಕೈಯವರಾದ ಲೇಖಕರ ವ್ಯಕ್ತಿಚಿತ್ರವೂ –ಲೇಖಕರು ಅರಿತೋ, ಅರಿಯದೆಯೋ—ಈ ಪುಸ್ತಕದಲ್ಲಿ ಬಂದುಬಿಟ್ಟಿದೆ. ಶೈಲಿ ವ್ಯಕ್ತಿತ್ವದ ಪ್ರತೀಕವೆಂಬ ಮಾತಿಗೆ ನಿದರ್ಶನವನ್ನು ನಾವು ಇಲ್ಲಿ ಕಾಣುತ್ತೇವೆ. ಇಲ್ಲಿಯ ಬರವಣಿಗೆಯಲ್ಲಿ ಮಾರ್ಮಿಕ ಹಾಸ್ಯ, ವಿವಿಧ ಸಂಗತಿಗಳ ನಿರೂಪಣೆ, ರಸವತ್ತಾದ ವರ್ಣನೆ, ಬಹುಶ್ರುತತ್ವ ನಿಕೃಷ್ಟವಾದ ವಿಮರ್ಶೆ, ಪುರಾಣ, ಇತಿಹಾಸ, ರಾಜಕಾರಣದಲ್ಲಿಯ ಕುಶಲ ಹೋಲಿಕೆಗಳು, ಸ್ವಲ್ಪದರಲ್ಲಿಯೇ ಸ್ವಭಾವವನ್ನು ಮೂಡಿಸುವ ಕೌಶಲ್ಯ, ಮನೋರಂಜಕ ಚರ್ಚೆ— ಇವೆಲ್ಲ ಕಂಡುಬರುತ್ತವೆ. ಇವಲ್ಲದೆ ಈ ಲೇಖಕರ ಕಿಡಿನುಡಿಗಳು ಗದ್ಯಶೈಲಿ ಅನುಪಮವಾಗಿವೆ. ಬಿಡಿಬಿಡಿಯಾದ ಅರ್ಥಪೂರ್ಣ ಪದಗಳಿಂದ, ಸಂಗ್ರಾಹಕ ಹಾಗೂ ತೂಕವುಳ್ಳ ವಾಕ್ಯಗಳಿಂದ ಕೂಡಿದ ಗದ್ಯಶೈಲಿಯ ಸೊಗಸು ಇಲ್ಲಿದೆ. ' ವರ್ಧಾಯಾತ್ರೆ 'ಗೆ ಒಂದು ಮುನ್ನುಡಿಯನ್ನು ಬರೆದ ಶ್ರೀ. ತಿ. ತಾತಾಚಾರ್ಯ ಶರ್ಮರ ಮಾತನ್ನು ಇಲ್ಲಿ ಉದಾಹರಿಸಬಹುದು : " ಕೃಷ್ಣಶರ್ಮರು ರಸಜ್ಞರು; ಭಾವಜ್ಞರು; ಕಲಾವಿದರು : ಮೇಲಾಗಿ ವಿಮರ್ಶಕರು. ಅವರು ವರ್ಧಾಯಾತ್ರೆ ಮಾಡಿದರು. ಅವರ ಕಣ್ಣು ಕಂಡುದನ್ನು, ಕಿವಿ ಕೇಳಿದ್ದನ್ನು, ಮನಸ್ಸು ಗ್ರಹಿಸಿದ್ದನ್ನೂ ಎಲ್ಲವನ್ನೂ ಚಾಚೂ ತಪ್ಪದೆ ಇಲ್ಲಿ ಕೊಟ್ಟಿದ್ದಾರೆ. ಮಾತು ಮಾತಿನ ಮೇಲೂ ಶಕ್ತಿಯ, ಸ್ವಾತಂತ್ರ್ಯದ, ಹಾಸ್ಯದ ಮುದ್ರೆಯನ್ನೊತ್ತಿದ್ದಾರೆ. ಕೆಲವು ಕಡೆ

ಅವರ ಪರವಶತೆಯು ಅವರ ಗದ್ಯವನ್ನು ಕವಿತೆಯ ಮಟ್ಟಕ್ಕೇರಿಸುತ್ತದೆ." ಒಂದೊಂದು ವಿಶೇಷಣಮಾತ್ರದಿಂದ—ಉದಾಹರಣೆಗಾಗಿ, ಪಟ್ಟಾವರಸೆಯ ಪಟ್ಟಾಭಿ, ದ್ವಾರದೇವತೆ ಮಣಿಬೇನ್, ಉಗ್ರಬೈರಾಗಿ ಕೃಪಲಾನಿ, ತಾರ್ಕಿಕ ಸಿಂಹ ರಾಜಾಜಿ, ವಜ್ರಹೃದಯಿ ಸರದಾರ— ವ್ಯಕ್ತಿಪರಿಚಯ ವನ್ನು ಮಾಡಿಕೊಡುವದನ್ನು ಸೂಚಿಸಿದ್ದಾರೆ. ಇನ್ನೊಬ್ಬ ಮುನ್ನಡಿಕಾರ ರಾದ ಶ್ರಿ. ದ ರಾ. ಬೇಂದ್ರೆಯವರು ಕೃಷ್ಣಶರ್ಮರ ಶೈಲಿಯ ಗುಣಗಳನ್ನು ಹೇಳುವಾಗ ಅದನ್ನು ಪಾರದರ್ಶಕ, ದೂರದರ್ಶಕ, ಸೂಕ್ಷ್ಮದರ್ಶಕವೆಂದು ಕರೆದಿದ್ದಾರೆ. ಈ ಹೇಳಿಕೆಗಳು ನಿಜವೆಂಬುದು ಗ್ರಂಥವಾಚನದಿಂದಲೂ ತಿಳಿದುಬರುತ್ತಿದೆ.

ದೀಪಾವಳಿಯ ಕಾಲಕ್ಕೆ ಪ್ರಕಟವಾದ 'ದೀಪಮಾಲೆ'ಯು ಮಹಾತ್ಮಾ ಗಾಂಧಿಯವರ ಪ್ರಭಾವಳಿಯ ಹದಿಮೂರು ಹಾಗೂ ಇನ್ನಿಬ್ಬರು ಹೀಗೆ ಹದಿನೈದು ನಾಯಕರ ವ್ಯಕ್ತಿಪರಿಚಯದ ರೇಖಾಚಿತ್ರಸಂಗ್ರಹವಾಗಿದೆ. ಈ ರಾಜಕೀಯ ನಾಯಕರ—ಗಾಂಧೀಭಕ್ತರ—ವ್ಯಕ್ತಿಚಿತ್ರಗಳ ಸಂಗ್ರಹದಲ್ಲಿ ಶ್ರೇಷ್ಠ ವಿದ್ವಾಂಸರೂ ತತ್ವಜ್ಞಾನಿಗಳೂ ಆದ ಸರ್. ಎಸ್. ರಾಧಾಕೃಷ್ಣನ್ ಅವರ ಹಾಗೂ ಈಚೆಗೆ ಗಾಂಧಿಯವರ ಶಿಷ್ಯತ್ವವನ್ನು ಒಪ್ಪಿದ ಶರತ್‌ಚಂದ್ರ ಬೋಸ ಇವರ ಚಿತ್ರಗಳೂ ಬಂದಿವೆ. ಇವೆರಡು ಚಿತ್ರಗಳು ಈ ಸಂಗ್ರಹದಲ್ಲಿ ಅಷ್ಟೊಂದು ಹೊಂದಿಕೆಯಾಗುವದಿಲ್ಲವೆಂದು ತೋರುತ್ತಿದೆ. 'ವರ್ಧಾ ಯಾತ್ರೆ'ಯಲ್ಲಿ ಬಗೆಬಗೆಯ ವಿಷಯಗಳಿದ್ದರೆ, ಈ 'ದೀಪಮಾಲೆ' ವ್ಯಕ್ತಿಚಿತ್ರದ ವಿಷಯವೊಂದನ್ನೇ ಗುರಿಯಾಗಿಟ್ಟುಕೊಂಡಿದೆ. ಇತರ ಸಂಗತಿಗಳೂ ಒಮ್ಮೊಮ್ಮೆ ಬರುತ್ತಿದ್ದರೆ ಅದು ಲೇಖಕರ ಶೈಲಿಯ ವೈಶಿಷ್ಟ್ಯ ವೆಂದೆನ್ನಬೇಕು. ಅಂತೂ ಈ ಪುಸ್ತಕ 'ವರ್ಧಾಯಾತ್ರೆ'ಗಿಂತ ಹೆಚ್ಚು ವ್ಯವಸ್ಥಿತವೆಂಬ ಮಾತೇನೋ ನಿಜ.

'ವ್ಯಕ್ತಿ ಪರಿಚಯ'ವೆಂಬ ಸಾಹಿತ್ಯರೂಪದಲ್ಲಿ ಕೃಷ್ಣಶರ್ಮರು ಎತ್ತಿದ ಕೈಯೆಂದು ಈ ಗ್ರಂಥ ಕೈ ಎತ್ತಿ ಹೇಳುವಂತಿದೆ. ವ್ಯಕ್ತಿಗಳ ಸ್ವಭಾವಚಿತ್ರವನ್ನು ನಿರೂಪಿಸುವಾಗ ಆ ವ್ಯಕ್ತಿಗಳ ವ್ಯಕ್ತಿತ್ವವನ್ನು, ಅಂತರಂಗವನ್ನು ಸ್ಫುಟವಾಗಿ ಸುಂದರವಾಗಿ ಇವರು ನಿರೂಪಿಸಬಲ್ಲರು. ವ್ಯಕ್ತಿಗಳ ಜೀವನಕ್ಕೆ ಸಂಬಂಧಿಸಿದ ಶುಷ್ಕವಾದ ಇತಿಹಾಸವನ್ನು ಹೇಳದೆ ವ್ಯಕ್ತಿತ್ವದ ಮೇಲೆ ಬೆಳಕನ್ನು

ಕೆಡಹುವ ವಿಷಯುಗಳನ್ನಷ್ಟೇ ಆರಿಸಿಕೊಳ್ಳುವದರಲ್ಲಿ ಈ ಲೇಖಕರ ಜಾಣ್ಮೆಯಿದೆ ಪರಿಚಯುಗಳ ಆರಂಭವನ್ನು ಇವರು ಆಕರ್ಷಕ ರೀತಿಯಲ್ಲಿ ಮಾಡುವುದುಂಟು. "ನಾನು ಬ್ರಾಹ್ಮಣೆ; ಭಿಕ್ಷಾಂ ದೇಹಿ, ಎಂದು ಬಂದಿದೇನೆ" ಎಂದು ಸರೋಜಿನಿದೇವಿಯ ಪರಿಚಯವನ್ನು ಆರಂಭಿಸಿದ್ದಾರೆ. ಸರೋಜಿನಿದೇವಿಯ ಜೀವನದ ತಿರುಳನ್ನು, ಅವಳ ಸೌಂದರ್ಯೋಪಾಸನೆಯನ್ನು, ಧೀರವೃತ್ತಿಯನ್ನು ಮನೋವೇಧಕವಾದ ರೀತಿಯಲ್ಲಿ ಕೃಷ್ಣಶರ್ಮರು ಇಲ್ಲಿ ಚಿತ್ರಿಸಿದ್ದಾರೆ. ಈ ಸಂಗ್ರಹದಲ್ಲಿಯ ಶ್ರೇಷ್ಠವಾದ ಬರವಣಿಗೆಯಾಗಿದೆ, ಈ ವ್ಯಕ್ತಿಚಿತ್ರ. ಈ ಚಿತ್ರವನ್ನು ಸಂಗ್ರಹಿಸಿ ಅವರೇ ಹೀಗೆ ಹೇಳಿದ್ದಾರೆ. "ಸರೋಜಿನಿದೇವಿ ಭಾರತ ಕಾವ್ಯಾಂಬರದ ಬೆಳುದಿಂಗಳು; ಹಿಂದುಸ್ತಾನದ ಕವಿಚೂತವನದ ಕೋಕಿಲೆ. ಆಕೆಯ ವಾಣಿ ವೇಣುಗಾನ; ಭಾಷಣ ರಸಗಂಗೆ; ಆಕೆಯ ಜೀವನ ನಿರಂತರ ಸೌಂದರ್ಯೋಪಾಸನೆ."— ಈ ವಾಕ್ಯವು ಹೃದಯಂಗಮವಾಗಿದೆ. ಇಂತಹ ಬರವಣಿಗೆಯಿಂದ ಹೊಸಗನ್ನಡ ಸಾಹಿತ್ಯ ಮೇಲುಮಟ್ಟವನ್ನು ಪಡೆಯಬಲ್ಲದು.

ವ್ಯಕ್ತಿತ್ವದ ಗುಟ್ಟನ್ನು ಸ್ಫುಟವಾಗಿ, ಸಂಗ್ರಹವಾಗಿ ಹೇಳಬಲ್ಲರು, ಈ ಲೇಖಕರು. ಸರೋಜನಿಯನ್ನು ಕುರಿತು "ಚಲುವು–ನಲವುಗಳ ಪೂಜೆಯೇ ಸರೋಜನೀದೇವಿಯ ಜೀವನ ರಹಸ್ಯ, ಗೆಲವಿನ ಗುಟ್ಟು. ಅದೇ ಆಕೆಯ ಜೀವನ ಸಂಗೀತದ ಶ್ರುತಿ" ಎಂದಿದಾರೆ. ಠಕ್ಕರಬಾಪಾರನ್ನು ಕುರಿತು "ನಿಯಮಬದ್ಧ ಜೀವನ, ಕೆಲಸದಲ್ಲಿರುವ ಆನಂದಗಳೇ.... ಅವರ ಆದರ್ಶ ಜೀವನದ ಅಡಿಗಲ್ಲು." ಎಂದು ಹೇಳಿದ್ದಾರೆ. ಅಬುಲ್ ಕಲಾಮ್ ಆಜಾದರನ್ನು ಕುರಿತು ಮೌಲಾನಾರ ಸ್ವಭಾವವೇ ಹಾಗೆ; ಅತಿ ಸರಳ; ಅವರ ಮಾತಿನಲ್ಲಿ ತರ್ಕದ ಚಾಕಚಕ್ಯವಿಲ್ಲ; ಶ್ರದ್ಧೆ ಗಾಂಭೀರ್ಯವಿದೆ" ಎಂದು ಬರೆದಿದ್ದಾರೆ. ಇದರಂತೆ ರಾಜೇಂದ್ರಬಾಬುಗಳ ಅಮೃತತ್ವದ ಗುರುತನ್ನು ಅವರ ಗುಟ್ಟನ್ನು ಸ್ಫುಟವಾಗಿ ಹೇಳಿದ್ದಾರೆ. ವ್ಯಕ್ತಿಗಳನ್ನು ವರ್ಣಿಸುವ ರೀತಿಯಲ್ಲಿಯೂ ಕೃಷ್ಣಶರ್ಮರು ಮಾರ್ಮಿಕತೆಯನ್ನು ತೋರಿಸುತ್ತಾರೆ. ಸರ್ ರಾಧಾಕೃಷ್ಣರ ಪರಿಚಯ ಹೀಗೆ ಆರಂಭವಾಗುತ್ತದೆ. "ಬೆಳ್ಳಗೆ ಹೊಳೆವ ಮಿಲ್ಲಿನ ಧೋತರ, ಶುಭ್ರವಾದ ರೇಶಿಮೆಯ ನಿಲುವಂಗಿ, ರುಮಾಲು; ಈ

ಮುಗುಳು ನಗೆ, ಈ ಅಭಿಮಾನದ ಮಾತು, ಕಣ್ಣಿನ ಮಿಂಚಿನಗೊಂಚಲು ಮನೆತುಂಬ ಮಕ್ಕಳು, ಬಳಗ–ಇದೇ ಏನು ವೇದಾಂತದ ಲಕ್ಷಣ ?''

ವ್ಯಕ್ತಿತ್ವವನ್ನು ಸರಿಯಾಗಿಯೂ ಸ್ಫುಟವಾಗಿಯೂ ತಿಳಿಸುವ ಈ ಲೇಖಕರು ವ್ಯಕ್ತಿಗಳ ಸ್ವಭಾವಗಳೊಂದಿಗೆ ದೋಷಗಳನ್ನು ಸೂಚಿಸುವ ಧೈರ್ಯವನ್ನು ಪ್ರಾಮಾಣಿಕತನವನ್ನು ಈ ಗ್ರಂಥದಲ್ಲಿ ತೋರಿಸಿದ್ದಾರೆ. ಅಪ್ರಿಯ ಸತ್ಯಗಳನ್ನು ಹೇಳುವ ಜಾಣ್ಮೆ ನೈತಿಕ ಧೈರ್ಯ ಈ ಲೇಖಕರಿಗಿವೆ. ಈ ಮಾತಿಗೆ ಉದಾಹರಣೆಯು ಸರದಾರ ವಲ್ಲಭಬಾಯಿಯವರ ಪರಿಚಯದಲ್ಲಿದೆ. ವಲ್ಲಭಬಾಯಿಯವರ ವ್ಯಕ್ತಿತ್ವದ ಗುಣಗಳನ್ನೂ ದೋಷಗಳನ್ನೂ ಸೂಚಿಸುತ್ತ ಈ ಲೇಖಕರು "ಸರದಾರರ ಲೆಕ್ಕದಲ್ಲಿ ಯಾಜಮಾನ್ಯದ ಹೊರತು ಬೇರೆ ಬಾಬತ್ತು ಇಲ್ಲವೇ ಇಲ್ಲ. ಜನರ ಅಭಿಪ್ರಾಯಕ್ಕೆ ಬೆಲೆಕೊಡುವದಿಲ್ಲವೆಂದು ವಲ್ಲಭಬಾಯಿಯವರು ಪಂಥ ತೊಟ್ಟಿದ್ದಾರೆ. ತಿರಸ್ಕಾರಶಾಸ್ತ್ರಕ್ಕೆ ಅವರೇ ಕರ್ತೃ. ಸರದಾರರ ಬಾಳಿನಲ್ಲಿ ಅವರ ನಿಷ್ಕರುಣೆಯ ಪ್ರಸಂಗ ಅನೇಕ ಆಗಿವೆ. ಅವರ ದೃಢಸಂಕಲ್ಪ ಬಲ ಭೀಮನ ಗದೆಯಂಥದು.'' ಇತ್ಯಾದಿ ಮಾತುಗಳನ್ನು ಬರೆದಿದ್ದಾರೆ. ಈ ಸ್ಪಷ್ಟೋಕ್ತಿಯನ್ನು ಯಾರೂ ಮೆಚ್ಚಬಹುದು. ಎಚ್. ಜಿ. ಗಾರ್ಡಿನರ ಅವರ ವ್ಯಕ್ತಿಚಿತ್ರಗಳಲ್ಲಿ ಇಂತಹ ಸ್ಪಷ್ಟೋಕ್ತಿಯು ವಿಪುಲವಾಗಿ ಕಂಡುಬರುತ್ತಿದೆ. 'ದೀಪಮಾಲೆ'ಯನ್ನೋದುವಾಗ ಎ. ಜಿ. ಗಾರ್ಡಿನರರ ವ್ಯಕ್ತಿಚಿತ್ರಗಳ ಗ್ರಂಥಗಳ (Certain people of Importance, Pillars of Society, Prophets Priests and Kings) ಸ್ಮರಣೆ ಅನಿವಾರ್ಯವಾಗುತ್ತದೆ. ಅಲ್ಲಿಯ ಶೈಲಿಯಲ್ಲಿಯ ಹಿಡಿತ, ಮಾರ್ಮಿಕ ರೀತಿ, ಮಿಂಚಿನ ವೇಗ, ಪ್ರಾಮಾಣಿಕ ವಿಮರ್ಶೆ— ಇವುಗಳು ಕೆಲವಂಶದಿಂದಾದರೂ ಕೃಷ್ಣಶರ್ಮರ ಬರವಣಿಗೆಯಲ್ಲಿ ಕಂಡುಬರುತ್ತಿವೆ. ಆದರೆ ಇದು ಗಾರ್ಡಿನರರ ಅನುಕರಣದ ಫಲವಲ್ಲವೆಂದು ನಾನು ಈಚೆಗೆ ತಿಳಿದುಕೊಂಡೆ.

ವರ್ಷಾಯಾತ್ರೆ, ದೀಪಮಾಲೆ ಈ ಪುಸ್ತಕಗಳ ರಚನೆಯಲ್ಲಿ ಕೆಲ ಮಟ್ಟಿಗೆ ವ್ಯತ್ಯಾಸವಿರುವದಾದರೆ ಈ ಎರಡು ಗ್ರಂಥಗಳಿಗೂ 'ಪರ್ಣಕುಟಿ' ಗೂ ಇನ್ನೂ ಹೆಚ್ಚಿನ ವ್ಯತ್ಯಾಸ ಕಂಡುಬರುತ್ತಿದೆ.

'ಪರ್ಣಕುಟಿ' ಗ್ರಂಥದ ಪರಿಚಯುವನ್ನು ಲೇಖಕರು ತಮ್ಮ ಮೊದಲ ಮಾತಿನಲ್ಲಿ ಮಾಡಿಕೊಡಲು ಯತ್ನಿಸಿದ್ದಾರೆ : 'ಪರ್ಣಕುಟಿ' ಮುಖ್ಯವಾಗಿ ೧೯೩೮–೩೯ರಲ್ಲಿ ನನ್ನ ಮನಸ್ಸಿನಲ್ಲಿ ಮೂಡಿದ ಭಾವನೆಗಳ, ಭಾವನೆಗೆ ಬಂದ ಬಣ್ಣದ ಚಿತ್ರ.... 'ವರ್ಧಾಯಾತ್ರೆ'ಯಲ್ಲಿ ಮೂಡಿದ್ದ ಚಿತ್ರವನ್ನೇ ಇಲ್ಲಿ ಅರಳಿಸಲಾಗಿದೆ. ವರ್ಧಾದಿಂದ ಇಲ್ಲಿ ಸೇವಾಗ್ರಾಮಕ್ಕೆ, ಪರ್ಣಕುಟಿಗೆ ಮಾತ್ರ ನಡೆದಿದೆ." ಎಂದು ಲೇಖಕರು ಬರೆಯುತ್ತಾರೆ. ಅರ್ಥಾತ್ ಇದು 'ಪರ್ಣಕುಟಿಯಾತ್ರೆ.'

'ಪರ್ಣಕುಟಿ'ಯಲ್ಲಿ ಗಾಂಧೀ ವಿಚಾರ ವಿಮರ್ಶೆಯೂ ಇದೆ. ಈ ಗ್ರಂಥದ 'ತಳಹದಿ' ಎಂಬ ಪ್ರಕರಣದಲ್ಲಿ 'ಪ್ರಾರ್ಥನೆ'ಯ ಬಗೆಗೆ ಗಾಂಧೀಜಿಯವರ ವಿಚಾರದೋಹನ, ವಿಮರ್ಶೆಗಳು ಕಂಡುಬರುತ್ತಿವೆ. ಅದರಂತೆ 'ಧರ್ಮಸಾರಥಿ' ಎಂಬ ಪ್ರಕರಣದಲ್ಲಿ ಖಾದಿಯ ಬಗೆಗೆ ವಿಚಾರ ವಿಮರ್ಶೆಗಳಿವೆ. 'ಅಹಿಂಸೆಯ ಅವತಾರ'ವೆಂಬ ಪ್ರಕರಣದಲ್ಲಿ ಗಾಂಧೀಜಿಯವರು ಹೆಣ್ಣಿಗೆ ಕೊಟ್ಟ ಶ್ರೇಷ್ಠ ಸ್ಥಾನವನ್ನು ಚರ್ಚಿಸಲಾಗಿದೆ. ಅಲ್ಲದೆ "ಇಷ್ಟೆಲ್ಲ ಶ್ರೀರಂಗನೀತಿ ಹೇಳಿಯೂ ಗಂಡು ಹೆಣ್ಣನ್ನು ಬಿಟ್ಟಿಲ್ಲ"ವೆಂಬುದನ್ನು ಸೂಚಿಸಿ "ಗಂಡುಸಿನ ಈ ವಿಚಿತ್ರ ವೈರಾಗ್ಯ ಬಾಪೂಗೆ ಅರ್ಥವಿಲ್ಲದ ಅವಾಂತರ'ವೆಂದು ಅಭಿಪ್ರಾಯಪಟ್ಟಿದ್ದಾರೆ. ಮತ್ತು ಹೆಣ್ಣು ಗಾಂಧೀಜಿಗೆ ತಾಯಿ. ಆಕೆ ಇಂದ್ರಿಯಭೋಗದ ಪದಾರ್ಥವೆಂಬುದು ಹೊಲ್ಲ. ಹೆಣ್ಣು ಪಾವನರೂಪಿ" ಎಂದು ಮುಂತಾಗಿ ಬರೆದಿದ್ದಾರೆ. 'ಅನಾಸಕ್ತಿಯ ಕನಸು' ಎಂಬ ಪ್ರಕರಣದಲ್ಲಿ ಗೀತೆಯ ಬಗೆಗೆ ಗಾಂಧೀಯವರ ವಿಚಾರ ವಿಮರ್ಶನಗಳಿವೆ. "ಗಾಂಧೀಜಿಗೆ ಗೀತೆ ಕಾಮಧೇನು ಇದ್ದ ಹಾಗೆ.... ಗೀತೆ ಇವರ ಕಂಠಮಾಲೆ," ಎಂದು ಅಭಿಪ್ರಾಯಪಟ್ಟು ಸಾಬರಮತಿ ಆಶ್ರಮದಲ್ಲಿ ಪ್ರಾರ್ಥನೆಯ ಹೊತ್ತಿನಲ್ಲಿ ಒಮ್ಮೆ ಗಾಂಧೀಜಿಯವರು ಗೀತಾಧ್ಯಾಯದ ಬಗೆಗೆ ಹೇಳಿದ ವಿಚಾರಗಳ ದೋಹನವನ್ನು ಕೊಡಲಾಗಿದೆ. ದೇವರ ಅಸ್ತಿತ್ವದ ಬಗೆಗೆ ಗಾಂಧೀಜಿಯವರ ವಿಚಾರಗಳು 'ಕರುಣಾಳು– ಬೆಳಕು' ಎಂಬ ಪ್ರಕರಣದಲ್ಲಿವೆ. ಹೀಗೆ 'ಪರ್ಣಕುಟಿ' ಗ್ರಂಥವು ಗಾಂಧೀಜೀಯ ಬಗೆಗೆ ತಾತ್ವಿಕ ವಿವೇಚನೆಯನ್ನೊಳಗೊಂಡ ಗ್ರಂಥವಾಗಿದೆ. ಸರೋಜಿನಿದೇವಿ ಗಾಂಧಿಯವರನ್ನು 'ಬಹುರೂಪಿ' ಎಂದು ಕರೆದುದನ್ನೇ ಆಧಾರವಾಗಿಟ್ಟು

ಕೊಂಡು ಈ ಲೇಖಕರು ಕಲಾವಿದ ಗಾಂಧಿ, ಸಾಹಿತಿ ಗಾಂಧಿ, ನಗೆಗಾರ ಗಾಂಧಿ, ಮಕ್ಕಳಮಧ್ಯದ ಚಿಕ್ಕೆಗಳ ಚಂದ್ರಾಮ ಗಾಂಧಿ, ಪತ್ರಲೇಖಕ ಗಾಂಧಿ—ಹೀಗೆ ವಿವಿಧ ದೃಷ್ಟಿಕೋನಗಳಿಂದ ಗಾಂಧಿಯವರ ಜೀವನವನ್ನು ಕೃಷ್ಣಶರ್ಮರು ವಿವರಿಸಿದ್ದಾರೆ: ವಿಮರ್ಶಿಸಿದ್ದಾರೆ. 'ಸಾಹಿತಿಗಾಂಧಿ' ಎಂಬ ವಿಭಾಗದಲ್ಲಿ ಗಾಂಧಿಯವರ ಶೈಲಿಯ ವಿಮರ್ಶೆಯೂ ಇದೆ.

ತಾತ್ವಿಕ ಚರ್ಚೆಯನ್ನೊಳಗೊಂಡ ಈ ಗ್ರಂಥದ ಶೈಲಿಯಲ್ಲಿ ಒಂದು ರೀತಿಯ ಬಿಗುವೂ ವ್ಯವಸ್ಥೆಯೂ ಕಂಡುಬರುವದುಂಟು. 'ವರ್ಧಾ ಯಾತ್ರೆ'ಯ ಶೈಲಿಯೊಂದಿಗೆ ಇದನ್ನು ಹೋಲಿಸಿ ನೋಡಿದಾಗ ಈ ವ್ಯತ್ಯಾಸ ಸ್ಫುಟವಾಗಿ ಕಂಡುಬರುವದು. ಚರ್ಚೆ ಅಧಿಕೃತವಾಗುವಂತೆ ಲೇಖಕರು ಅಲ್ಲಲ್ಲಿ ಅವತರಣಿಕೆಗಳನ್ನೂ ಕೊಟ್ಟಿದ್ದಾರೆ. ಅಲ್ಲದೆ ಲೇಖಕರ ವಾಡಿಕೆಯ ಶೈಲಿಯ ಮಾರ್ಮಿಕ ರೀತಿಯೂ ಇಲ್ಲಿದೆ. ಕಥೆಗಳು, ದೃಷ್ಟಾಂತಗಳು, ಸುಭಾಷಿತಗಳು, ಇವುಗಳ ಸಮೀಚೀನವಾದ ಭಕ್ಷ್ಯ ಓದುಗರಿಗೆ ಇಲ್ಲಿ ದೊರೆಯುತ್ತಿದೆ. ಈ ಗ್ರಂಥದಲ್ಲಿ ಗಂಭೀರ ವಿಷಯ ನಿರೂಪಣೆ ಇರುವುದಾದರೂ ಮೇಲೆ ಸೂಚಿಸಿದ ಸಮೀಚೀನವಾದ ಭಕ್ಷ್ಯದಲ್ಲಿ ವಿಷಯನಿರೂಪಣೆ ಜಟಿಲವಾದುದೆಂದು ಅನಿಸುವದಿಲ್ಲ. ಈ ಗ್ರಂಥವನ್ನು ಓದುತ್ತಿರುವಾಗ ಲೇಖಕರ ಸೂಕ್ಷ್ಮ ನಿರೀಕ್ಷಣೆ, ವಿಪುಲ ಅನುಭವ ಇವುಗಳು ಗೋಚರವಾಗುತ್ತಿವೆ. ಗಾಂಧಿಯವರ ನಿಕಟ ಪರಿಚಯದಿಂದ ಅನೇಕ ವಿಷಯಗಳನ್ನು ಸಂಗ್ರಹಿಸಿದ ಇವರ ಸೂಕ್ಷ್ಮಗ್ರಾಹಿ ಮನಸ್ಸಿನ ಚಿತ್ರಗಳು ಮಾರ್ಮಿಕ ಶೈಲಿಯಲ್ಲಿ ನಿರೂಪಿತವಾಗಿ ಉದಾತ್ತವಿಷಯ, ಉತ್ತಮ ಶೈಲಿ ಇವುಗಳ ಸಂಗಮದಿಂದ ಒಳ್ಳೆಯ ಸಾಹಿತ್ಯವೇ ಹೊರಹೊಮ್ಮಬೇಕಷ್ಟೇ? ಹೀಗೆ ಹೊರಹೊಮ್ಮಿದ ಈ ಉತ್ತಮ ಸಾಹಿತ್ಯ ಕೃತಿಗೆ ಓದುಗರ ಮೆಚ್ಚಿಗೆಯೂ ದೇವರಾಜ ಬಹಾದ್ದೂರ ನಿಧಿಯ ಪಾರಿತೋಷಕದ 'ಪ್ರಶಸ್ತಿ'ಯೂ ದೊರೆತಿವೆ.

## ೧೧. "ಯುಗ ಪ್ರವರ್ತಕ ಬಸವಣ್ಣನವರು"

(ಶ್ರೀ 'ಚಿಂತಾಮಣಿ')

ಬಸವಣ್ಣನವರನ್ನು ಕುರಿತು ವಿಪುಲವಾದ ಬರವಣಿಗೆ ಕನ್ನಡದಲ್ಲಿ ಬಂದಿದೆ; ಬರುತ್ತಲಿದೆ. ಹಂಪೆಯ ಹರಿಹರ ದೇವನಿಂದ ಹರ್ಡೆಕರ ಮಂಜಪ್ಪ ನವರ ವರೆಗೆ ಹಾಗೂ ನಂತರದ ಕನ್ನಡ ಗ್ರಂಥಗಳನ್ನು ಮತ್ತು ಸಂಸ್ಕೃತ ಆಂಧ್ರ, ತಮಿಳು, ಮರಾಠಿ ಭಾಷೆಗಳಲ್ಲಿಯ ಗ್ರಂಥಗಳನ್ನು ಇಲ್ಲಿ ನಿರ್ದೇಶಿಸ ಬೇಕಾಗಿಲ್ಲ. ಬಸವಣ್ಣನವರನ್ನು ಕಾರಣಿಕ ಪುರುಷರೆಂದು, ಮಹಾತ್ಮರೆಂದು, ಭಕ್ತಿ ಭಾಂಡಾರಿಯೆಂದು, ಕನ್ನಡ ಕುಲೋದ್ಧಾರಕರೆಂದು ಚಿತ್ರಿಸಿದ ನಾಟಕ, ಚರಿತ್ರಗಳೂ ಅನೇಕ ಬಿಡಿ ಲೇಖನಗಳೂ ಈ ಮೊದಲೇ ಬಂದಿರುವಾಗ ಹೊಸದಾಗಿ ಬರುತ್ತಿರುವ ಗ್ರಂಥಗಳು ತಮ್ಮ ಸಾರ್ಥಕತೆಯನ್ನು ಸಿದ್ಧಗೊಳಿ ಸದೆ ನಿರ್ವಾಹವಿಲ್ಲ. ಶ್ರೀ ಚಿಂತಾಮಣಿಯವರ ಚಿಕ್ಕ ಹೊತ್ತಗೆಯು ಅಂತಹ ಸಾರ್ಥಕತೆಯನ್ನು ಸಿದ್ಧಗೊಳಿಸಿದೆಯೆಂದು ಹೇಳಿಯೇ ಮುಂದೆ ಸಾಗಬೇಕಾಗಿದೆ. ಈ ಗ್ರಂಥದಲ್ಲಿಯ ಲೇಖನಗಳಲ್ಲಿ ಕೆಲವು ಪತ್ರಿಕೆಗಳಲ್ಲಿ ಬಂದಾಗಲೇ ಚಿಂತಾಮಣಿಯವರು ತಮ್ಮ ಲೇಖನದತ್ತ ವಾಚಕರ ದೃಷ್ಟಿ ಯನ್ನು ಎಳೆದರು. ಅವರ ವಿಚಾರಸರಣಿ ಆಗ ಕೆಲವರನ್ನು ಕೆಲಮಟ್ಟಿಗೆ ಕೆರಳಿಸಿದುದೂ ಉಂಟು. A good writing should, at least, provoke us ಎಂಬ ಹೇಳಿಕೆಗೆ ನಿದರ್ಶನ ಆಗಲೇ ದೊರೆಯಿತು. ಗ್ರಂಥದಲ್ಲಿ ಹುರುಳುಳ್ಳ ಹಾಗೂ ಪ್ರಚೋದಕ ವಿಚಾರ ಸರಣಿಯಿದೆಯೆಂದು ಹೇಳುವು ದಕ್ಕಾಗಿ ಮಾತ್ರ ನಾನು ಮೇಲಣ ಸಂಗತಿಯನ್ನು ಇಲ್ಲಿ ಉಲ್ಲೇಖಿಸುತ್ತಿದ್ದೇನೆ.

ಗ್ರಂಥದ ದೃಷ್ಟಿಯನ್ನು, ಗುರಿಯನ್ನು, ಲೇಖಕರೂ ಮುನ್ನುಡಿ ಕಾರರೂ ಸ್ಪಷ್ಟಗೊಳಿಸಿದ್ದಾರೆ. ಲೇಖಕರ ನುಡಿಗಳಿವು: "....ಕನ್ನಡಿಗನಾಗಿ ಮಾನವೀಯ ಗುರಿನಿರಿಯಕಡೆಗೆ ನೋಡಬಯಸುವಾಗ ಕನ್ನಡದ ಕುಲ ಗುರುವಾದ ಮಹಾತ್ಮಾ ಬಸವಣ್ಣನವರನ್ನು ಬಹು ವಿಧವಿಂದ ಕಾಣುವ ಪ್ರಯತ್ನದ ಫಲವೇ ಈ ಕಿರಿ ಹೊತ್ತಿಗೆ" "ಸಮಾಜವಾದದ ಆದರ್ಶ- ದೃಷ್ಟಿಯಲ್ಲಿಯೂ ಬಸವಣ್ಣನವರು ಎಷ್ಟು ಎದ್ದು ಕಾಣುತ್ತಾರೆಂಬುದನ್ನು ಈ

ಚಿಕ್ಕ ಹೊತ್ತಿಗೆಯಲ್ಲಿ ತೋರಿಸುವದಿದೆ.'' ಮುನ್ನುಡಿಕಾರರಾದ ಮಾನ್ಯ ಬಸವನಾಳರ ಅಭಿಪ್ರಾಯ ಹೀಗೆ. 'ಬಸವಣ್ಣನವರ ಸ್ಥಾನ ಮಾನಗಳನ್ನು ಕನ್ನಡ ಚರಿತ್ರಕಾರರಲ್ಲಿ ಹಲವರು ಕಂಡು ಕೊಂಡಿರುವರಾದರೂ ಜಗತ್ತಿನ ಜೀವ ಜ್ಯೋತಿಗಳಲ್ಲಿಯೂ ಬಸವಣ್ಣನವರು ಗಣ್ಯರೆಂಬ ಅರಿವು ನಮ್ಮವರಲ್ಲಿಯೂ ಇತರರಲ್ಲಿಯೂ ಬಲಪಟ್ಟು ನೆಲೆಗೊಳ್ಳಬೇಕಾಗಿದೆ.". ಇವರಲ್ಲಿ ಶ್ರೀ. ಚಿಂತಾಮಣಿಯವರು ಇಟ್ಟುಕೊಂಡಿರುವ ದೃಷ್ಟಿಕೋನ ಬಹ್ವಂಶದಿಂದ ಹೊಸತು.... ಯುಗಪ್ರವರ್ತಕರ ಮಾಲೆಯಲ್ಲಿ ಬಸವಣ್ಣನವರೂ ಸೇರ ತಕ್ಕವರಾಗಿದ್ದಾರೆಂಬ ನೋಟದಿಂದ ಈ ಗ್ರಂಥವನ್ನು ಸ್ವಾರಸ್ಯವಾಗಿ ಬರೆಯಲಾಗಿದೆ." ಗ್ರಂಥದ ಉದ್ದೇಶ ಹಾಗೂ ಪ್ರಯೋಜನಗಳನ್ನು ಕುರಿತ ಈ ಉಕ್ತಿಗಳು ಯಥಾರ್ಥವಾಗಿವೆ.

'ಜಗದ ಜಾಣರ ವಿಚಾರರೂಪೀ ತಂತುರ್ವನಿಗಳ ಮಧ್ಯೆ ತೂರಿ ಬರುವ ಸೂರ್ಯನ ಕಿರಣಗಳಿಂದ ಮೂಡಿದ ಕಾಮನಬಿಲ್ಲಿನ ಸಪ್ತವರ್ಣಗಳನ್ನು ಅನುಸರಿಸಿ ಈ ಪುಸ್ತಕದಲ್ಲಿ ಏಳು ಪ್ರಬಂಧಗಳಿವೆ. ಗ್ರಂಥದ ತಿರುಳನ್ನು ಮತ್ತು ಶೈಲಿಯನ್ನು ಪರಿಚಯಮಾಡಿಕೊಡುವ ದೃಷ್ಟಿಯಿಂದ ಗ್ರಂಥದಲ್ಲಿಯ ಕೆಲವು ಉಕ್ತಿಗಳನ್ನು ಆಯ್ದುಕೊಳ್ಳಲಾಗಿದೆ:

"ರಾವಣನನ್ನು ಕೊಂದು ವಿಭೀಷಣನನ್ನು ಪಟ್ಟಗಟ್ಟುವದಕ್ಕಿಂತ ರಾವಣನನ್ನೇ ವಿಭೀಷಣನನ್ನಾಗಿ ಮಾರ್ಪಡಿಸುವ ಧೋರಣ ಬಸವಣ್ಣನವರದು. ಇಂದಿನ ಮಹಾತ್ಮಾಗಾಂಧಿಯವರೂ ಅಂದಿನ ಮಹಾತ್ಮಾ ಬಸವಣ್ಣನವರೂ ಒಂದೇಯಾಗಿ ಕಾಣುವದಕ್ಕೆ ಈ ಧೋರಣಸಾಮ್ಯವೇ ಹೆಚ್ಚು ಕಾರಣವಾಗಿದೆ".

"ಒಳ್ಳೆಯದನ್ನೂ ಪಡೆಯುವದಕ್ಕಾಗಿ ಒಳ್ಳೆಯದನ್ನೇ ಸಾಧನವನ್ನಾಗಿ ಉಪಯೋಗಿಸಿಕೊಳ್ಳಬೇಕಲ್ಲವೇ. ಸದ್ಯದ ಸಿದ್ಧಿಗಿಂತಲೂ ಸಾಧನದ ಶುದ್ಧಿಯ ಕಡೆಗೇ ಹೆಚ್ಚು ಗಮನವಿತ್ತು ಬಸವಣ್ಣನವರು ಆರಿಸಿಕೊಂಡ ಸತ್ಯ, ದಯೆ, ಅಹಿಂಸೆ, ವಿಶ್ವಬಂಧುತ್ವ....ತತ್ವಗಳನ್ನು ಯಾರೂ ತಮ್ಮವೆಂದು ಅಪ್ಪಬಹುದು."

"ಅವರ (ಬಸವಣ್ಣನವರ) ಮಾನವ ಹೃದಯವನ್ನೆಚ್ಚರಿಸುವ ಅಗಾಧ ಶಕ್ತಿ ಇಂದಿಗೂ ನಮ್ಮನ್ನು ಮೋಹಿಸುತ್ತಿದೆ.

ಜನಸಾಮಾನ್ಯರನ್ನು ಕಾಲ ಕಸವಾಗಿ ತುಳಿಯುವ ಕಾಲದಲ್ಲಿ ಅದಕ್ಕೆ ದೇವತ್ವವನ್ನು ತಂದು ಕೊಟ್ಟವರವರು....ಅವರಿಗೆ ತಮ್ಮ ಧರ್ಮವನ್ನು ಬೆಳೆಸಬೇಕಾಗಿರಲಿಲ್ಲ. ಮಾನವ ಧರ್ಮವನ್ನು ಉಳಿಸಬೇಕಾಗಿದ್ದಿತು.''

'' .... ನಿಃಶಸ್ತ್ರ ಕ್ರಾಂತಿ ಎಬ್ಬಿಸಿದ ಕ್ರಾಂತಿ ಪುರುಷ ಬಸವಣ್ಣನವರ ಕ್ರಾಂತಿಯ ಫಲವಾಗಿಯೆ ಕನ್ನಡಿಗರು ಆತ್ಮ ಜಾಗ್ರತಿ ಪಡೆದದ್ದು. ಈ ಹದಗೊಳಿಸಿದ ಭೂಮಿಯಲ್ಲಿಯೇ ಮುಂದೆ ವಿಜಯನಗರ ಸಾಮ್ರಾಜ್ಯದ ಬೆಳೆ ಬಂದದ್ದು ''

ಬಸವಣ್ಣನವರು '' ಧರ್ಮದ ಅರಮನೆಯಲ್ಲಿನ ಒಂದು ವಿಶಿಷ್ಟ ವರ್ಗವು ತನ್ನ ಸ್ವಾರ್ಥಕ್ಕಾಗಿ ಬಹುಜನ ಸಮಾಜವನ್ನು ಹಿಂಡಿ ಹಿಪ್ಪೆ ಮಾಡುವದನ್ನು ತಡೆದು ಸುವ್ಯವಸ್ಥಿತಗೊಳಿಸುವ ದೆಶೆಯಿಂದಲೇ ಹುಟ್ಟಿದರು. ''

'' ವೈದಿಕ ಧರ್ಮದಲ್ಲಿ ಸೇರಿದ ಕೊಳೆಯ ಸಲುವಾಗಿ ಮಾತನಾಡಿದಾಗೆಲ್ಲ ಶುದ್ಧವಿದ್ದ ಮೂಲಧರ್ಮದ ವಿಷಯವಾಗಿ ಮಾತನಾಡಿದಂತೆ ಆಭಾಸವನ್ನುಂಟುಮಾಡಬಹುದೇ? ಅದು ಕೇವಲ ಪ್ರಚಾರವಲ್ಲ, ಅಪಪ್ರಚಾರ. ವ್ಯಕ್ತಿಯನ್ನಲ್ಲದೆ ಅವನಲ್ಲಿರುವ ನೀಚತನವನ್ನು ದ್ವೇಷಿಸುವೆನೆನ್ನುವ ಬಸವಣ್ಣನವರು ಒಂದು ಶುದ್ಧ ಧರ್ಮವನ್ನು ದ್ವೇಷಿಸಿದರೆಂಬ ಕಲ್ಪನೆ ಕೂಡ ಅಸಹ್ಯವೆನಿಸುತ್ತಿದೆ. ''

'' ಭವಿಷ್ಯ ಕಾಲದಲ್ಲಿ ಎಂದಾದರೂ ಇಂದಿನ ಸಾಂಪ್ರದಾಯಿಕ ಪಕ್ಷಪಾತಗಳು ಕಡಿಮೆಯಾಗಿ ಒಂದು ಹೆಚ್ಚು ವಿವೇಕಸಿದ್ಧವಾದ ವ್ಯಾಪಕ ಮಾನವ ಧರ್ಮವನ್ನು ಎಲ್ಲರೂ ಮನ್ನಿಸುವರಾದಾಗ ಬಸವಣ್ಣನವರು ಇಂದಿಗಿಂತಲೂ ಹೆಚ್ಚು ಎದ್ದು ಕಾಣುವರು. ''

'' ಕನ್ನಡ ನುಡಿಯಲ್ಲಿ ಗುಪ್ತವಾಗಿ ಹರಿಯುತ್ತಿದ್ದ ಮಾನವೀ ಜೀವನದ ಪರಿಚಯದಿಂದ ಜನಜೀವನದಲ್ಲಿ ಪ್ರಾಣವನ್ನು ತುಂಬಿ ಪರಿಪೂರ್ಣ ಜೀವನವನ್ನು ಸಾಗಿಸಲಣಿಮಾಡಿಕೊಟ್ಟ ಬಸವಣ್ಣನವರ ಸಾಹಸಕೃತಿ '' ಯಿಂದ ಇತಿಹಾಸದ ದಿಕ್ಕೇ ಬದಲಾಯಿತು.

'' ಭಾರತದ ಹೆಣ್ಣಿನ ಸ್ವಾತಂತ್ರ್ಯಕ್ಕೆ ಮನ್ನಣೆಯಿತ್ತ ಮಹಾಪುರುಷರಲ್ಲಿ ಬಸವಣ್ಣನವರು ಅಗ್ರಗಣ್ಯರು. ''

"ಸಾಮಾಜಿಕ ಸಮತೆಯು ಬಸವಣ್ಣನವರ ಕ್ರಾಂತಿಯ ಮಧ್ಯ ಬಿಂದುವಾಗಿತ್ತು....ಯೋಗ್ಯ ರೀತಿಯಿಂದ ತಕ್ಕ ಶಿಕ್ಷಣವನ್ನು ಸಮಾಜಕ್ಕೆ ಕೊಡುವದಕ್ಕಾಗಿ ನಾಡಿನ ತುಂಬೆಲ್ಲ ಅನುಭವ ಮಂಟಪದ ಅನುಭಾವಿಗಳ ಗುಂಜಾರವವು ಹಬ್ಬುವಂತೆ ಮಾಡಿದರು."

"ವಿಶ್ವಕರ್ನಾಟಕವನ್ನು ಪಡೆಯುವಷ್ಟು ಯೋಗ್ಯತೆ ಪಡೆಯಬಲ್ಲ ನಾಡು ಸಂಯುಕ್ತ ಕರ್ನಾಟಕವಾಗುವುದು ಕ್ಷಣಿಕ ಮಾತು."

— ಈ ಗ್ರಂಥದ ತಿರುಳನ್ನು ಸಂಗ್ರಹಿಸುವ ಪ್ರಯತ್ನವಿದು. ಎರಡನೆಯ ಪ್ರಕರಣದಲ್ಲಿ ಮಾನವ ಜನಾಂಗದ ಪ್ರಗತಿಯ, ಪ್ರಜಾಶಕ್ತಿಯ, ವಿಕಾಸದ ಚರಿತ್ರೆಯಿದೆ. ನಾಲ್ಕನೆಯದರಲ್ಲಿ ಕಲಾವಿದ, ಇತಿಹಾಸ, ಕ್ರಾಂತಿ, ಸಮಾಜರಚನೆ ಇವುಗಳ ಬಗೆಗೆ ಮನನೀಯ ವಿಚಾರಗಳೂ ಬಸವಣ್ಣನವರ ಬಗೆಗೆ ಕೆಲವರು ತೋರುವ ಸಂದೇಹಗಳಿಗೆ ಸಮುಚಿತ ಸಮಾಧಾನಗಳೂ ಇವೆ. ಕೊನೆಯ ಪ್ರಕರಣದಲ್ಲಿ ಇಂದಿನ ಕರ್ನಾಟಕದ ಸಮಸ್ಯೆಗಳ ಮೇಲೆ ಪ್ರಕಾಶ ಕೆಡಹುವ ದೃಷ್ಟಿಯಿದೆ. ಆ ದೃಷ್ಟಿಯಲ್ಲಿಯ ಸಮತೂಕವನ್ನು ಕನ್ನಡಿಗರು ಒಪ್ಪಬೇಕಾಗಿದೆ. ಅಲ್ಲಲ್ಲಿ ಬರುವ ಎಚ್ಚರಿಕೆಯಿದು: "ನೇತೃತ್ವಕ್ಕೆ ಬರುವ ಜಾಣರು ಸಮಾಜವನ್ನಾಳುವದಕ್ಕೆ ಬರದೆ ಸೇವೆ ಮಾಡುವದಕ್ಕಾಗಿ ಬಂದರೆ ಅವರ ಜಾಣತನ ಸತ್ಯದೃಷ್ಟಿಯಲ್ಲಿ ಇಳಿಯಬಹುದು. ಹಾಗಿರದೆ ಸ್ವಯಂಪ್ರತಿಷ್ಠಿತ ಜಾಣರ ಸತ್ತೆಯು ಪ್ರಜಾಸತ್ತೆಯಾಗುವದಾದರೆ ಅದು ಅನಿಯಂತ್ರಿತ ವರ್ಗದ ಸತ್ತೆಯಾಗಬಹುದಲ್ಲದೆ ಶುದ್ಧ ಸಮಾಜಸತ್ತೆಯಾಗಲಾರದು." ಇಂತಹ ಹಿತಕರ ಹೇಳಿಕೆಯೂ ನಮಗೆ ರುಚಿಸದೆ ಹೋದರೆ ನಮ್ಮ ನಾಡಿನ ಪರಿಸ್ಥಿತಿ ವಿಚಿತ್ರವಾಗಿದೆಯೆನ್ನಬೇಕಾಗುತ್ತಿದೆ.

ಗ್ರಂಥದ ವಿಚಾರ ಸರಣಿ ತರ್ಕಶುದ್ಧವಾಗಿದೆ. ವಿವಿಧ ವಿಷಯಗಳ ಅಭ್ಯಾಸಬಲದಿಂದ ಬಂದ ಉಪಯುಕ್ತ ನಿರೂಪಣೆ ಅನೇಕ ಕಡೆಗೆ ಕಂಡು ಬರುತ್ತಿದೆ. ಕೆಲವೊಂದು ನಿರೂಪಣೆಗೆ ಭಿನ್ನಾಭಿಪ್ರಾಯ ಸೂಚಿಸಲು ಸಾಧ್ಯವಿದೆ. ಆದರೆ ಇಲ್ಲಿಯ ವಿಚಾರ ಪ್ರಚೋದಕ ರೀತಿಯನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ದೃಷ್ಟಾಂತ, ಕಥೆ, ಹೋಲಿಕೆಗಳ ಮೂಲಕ ವಿಷಯವನ್ನು ಮನದಟ್ಟಾಗುವಂತೆ ವಿವೇಚಿಸಲಾಗಿದೆ. ಶೈಲಿಯು ಮಾರ್ಮಿಕವೂ

ಕೆಲವೆಡೆ ಶಕ್ತಿಯುತವೂ ಆಗಿದೆ. ಭಾಷಾಸರಣಿ ಪ್ರೌಢವಾಗಿದ್ದು ಕೆಲ ಮಟ್ಟಿಗೆ ಕ್ಲಿಷ್ಟವೂ ಆಗಿದೆ. ಸೂತ್ರರೂಪವಾದ ನಿರೂಪಣೆ ಹಾಗೂ ಕ್ಲಿಷ್ಟ ವಾದ ಭಾಷೆ ಇವುಗಳು ಸಾಮಾನ್ಯರಿಗೆ ತೊಡಕುಗಳಾಗಿ ಪರಿಣಮಿಸಬಹುದು. ಅಲ್ಲಲ್ಲಿ ಅಸ್ಪಷ್ಟ ವಾಕ್ಯರಚನೆ ನುಸುಳಿದೆ. ತಾರಾನಾಥರ 'ಧರ್ಮಸಂಭವ' ಗ್ರಂಥದ ಶೈಲಿಯ ಪ್ರಭಾವ ಕೆಲವೆಡೆ ಕಂಡುಬರುವಂತಿದೆ. ಪ್ರಚಲಿತ ವಿರುವ ಪದ (ಅಟ್ಲಾಂಟಿಕ್ ಪೋಷಣೆ, ಯಶಸ್ವಿ ಹಿನ್ನಡೆ)ಗಳನ್ನು ಜಾಣ್ಮೆ ಯಿಂದ ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳಲಾಗಿದೆ. ವಾದದ ರೀತಿಯಲ್ಲಿಯೂ ಕೌಶಲ್ಯ ಕಂಡು ಬರುತ್ತಿದೆ. ಕನ್ನಡ ಕುಲವು ಬಸವಣ್ಣನವ ರಿಂದ ಧನ್ಯವಾಗಿದೆಯೆಂದು ಸೂಚಿಸಿ ಅವರ ಪ್ರೇರಣೆಯಿಂದ ಕರ್ನಾಟಕವು ಮುಂಬರುವ ಜಗತ್ತಿನಲ್ಲಿ ಪ್ರಮುಖ ಪಾತ್ರ ವಹಿಸಬಲ್ಲದೆಂಬ ಆಶೆಯನ್ನೂ ಗ್ರಂಕರ್ತರು ಸೂಚಿಸಿದ್ದಾರೆ

ಬಸವಣ್ಣನವರನ್ನು ಕುರಿತು ಬರೆದ ಗ್ರಂಥವಿದೆಂದು ಹೇಳುವುದಕ್ಕಿಂತ ಬಸವಣ್ಣನವರನ್ನು ಉದಾಹರಣೆಯಾಗಿಟ್ಟುಕೊಂಡ ಒಂದು ವಿವೇಚನೆ ಯೆಂದು ಹೇಳುವುದು ಹೆಚ್ಚು ಉಚಿತವಾದೀತು. ಏಕೆಂದರೆ ವ್ಯಾಪಕವಾದ ಮಾನವತಾವಾದ, ಶುದ್ಧವಾದ ಸಾಮಾಜಿಕ ಸಮತಾವಾದ ಇತ್ಯಾದಿ ವಿಷಯಗಳನ್ನು ತಾತ್ವಿಕವಾಗಿಯೂ, ಐತಿಹಾಸಿಕವಾಗಿಯೂ ಚರ್ಚಿಸುತ್ತ ಬಸವಣ್ಣನವರನ್ನು ಅಲ್ಲಲ್ಲಿ ಉದಾಹರಣೆಯಾಗಿ ತೆಗೆದುಕೊಂಡಂತೆ ಗ್ರಂಥದ ನಿರೂಪಣೆಯಿದೆ. ಬಸವಣ್ಣನವರ ಜೀವನ, ಬೋಧೆ, ಸಾಧನೆಗಳ ಬಗೆಗೆ ಓದುಗರಿಗೆ ಸಾಕಷ್ಟು ಗೊತ್ತಿದೆಯೆಂದು ಗ್ರಹಿಸಿಯೇ ಇಂತಹ ವಿವೇಚನೆ ಮುಂದುವರಿಯುತ್ತಿದೆ. ಇಲ್ಲಿಯ ವಿವೇಚನೆಯು ಇನ್ನಷ್ಟು ವಿವರವಾಗಿಯೂ ವ್ಯವಸ್ಥಿತವಾಗಿಯೂ ಇದ್ದರೆ ಹೆಚ್ಚು ಅನುಕೂಲವಾಗುತ್ತಿತ್ತು.

ಬಸವಣ್ಣವನರನ್ನು ನೋಡುವ ಶ್ರೀ. ಚಿಂತಾಮಣಿಯವರ ದೃಷ್ಟಿ ಯಲ್ಲಿ ಹೊಸತನವಿದೆ. ನಿರ್ಣಯಗಳನ್ನು ನಿರೂಪಿಸುವಲ್ಲಿ ನಿರ್ಭಯ ವೃತ್ತಿ, ನಮ್ಮ ನಾಡಿನ ಬಗೆಗಿರುವ ಕಳಕಳಿಗಳು ಕಂಡುಬರುತ್ತವೆ. ದೇಶಪ್ರೇಮ, ಜನಜಾಗ್ರತಿ, ಕರ್ನಾಟಕದ ಏಳ್ಗೆ ಇವುಗಳಿಗಾಗಿ ಆಸ್ಥೆ ತೋರಿಸುವ, ದುಡಿಯುವ ಕನ್ನಡಿಗರು ಈ ಗ್ರಂಥದಲ್ಲಿಯ ವಿಚಾರಸರಣಿ ಯನ್ನು ನಿರ್ವಿಕಾರ ಮನಸ್ಸಿನಿಂದ ಗಮನಿಸುವದು ಆವಶ್ಯಕವಾಗಿದೆ.

## ೧೨. ಎಚ್ಚತ್ತ ಭಾರತ ಎತ್ತ ಸಾಗಿದೆ ! ( ಶ್ರೀ. ಗ. ಸ. ಹಾಲಪ್ಪ )

ಮೈಸೂರು ವಿದ್ಯಾಪೀಠದ ರಾಜಕೀಯ ವಿಜ್ಞಾನದ ಅಧ್ಯಾಪಕ ಶ್ರೀ. ಗ. ಸ. ಹಾಲಪ್ಪನವರ ಗ್ರಂಥವಿದು. ಮುಂಬಯಿ ಸರಕಾರದ ಮಾನ್ಯ ಉಪ ಮಂತ್ರಿಗಳಾದ ಕೆ. ಎಫ್. ಪಾಟೀಲರು ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ: '' ಶ್ರೀ. ಹಾಲಪ್ಪನವರ ಪುಸ್ತಕ ಸಕಾಲಿಕ, ಸುಪ್ರಯೋಜಕ .... ಆಗಾಗ ಕರ್ಣವನ್ನೇ ಕೊರೆಯುವ ವ್ಯಂಗೋಕ್ತಿ; ಹೃದಯವನ್ನೇ ಭೇದಿಸುವ ಹಾಸ್ಯೋಕ್ತಿ; ಹಳ್ಳಿಗರ ದಿನಬಳಿಕೆಯ ನುಡಿಯ ಮೆರಗು ತುಂಬಿವೆ. '' ಮುನ್ನುಡಿಯಲ್ಲಿ ಸಾಮಾನ್ಯವಾಗಿ ಕಂಡುಬರುವ ಸ್ತುತಿಯು ಇದಲ್ಲವೆಂದು ಪುಸ್ತಕ ವಾಚನದಿಂದ ಮನಗಾಣಬಹುದು. ಅರ್ಥವತ್ತಾದ, ನವೀನವಾದ ವ್ಯಂಗ್ಯ ಚಿತ್ರಗಳ ವೈಶಿಷ್ಟ್ಯದಿಂದ ಈ ಗ್ರಂಥ ಉಪಯುಕ್ತವಾಗಿದೆ.

ಕನ್ನಡದಲ್ಲಿ ಆಧುನಿಕ ರಾಜಕೀಯ ವಿಷಯದ ವಿವೇಚನೆಯುನ್ನೊಳಗೊಂಡ ಹೊತ್ತಿಗೆಗಳ ಅಭಾವವಿದೆ. ಹಿಂದೆ ಶ್ರೀ ಅಂಗಡಿ ಷಣ್ಮುಖಪ್ಪನವರು ಹಾವೇರಿಯ ಹಿರೇಮಠ ವಕೀಲರು ಸಮಯೋಚಿತ ಹೊತ್ತಿಗೆಗಳನ್ನು ಒದಗಿಸಿದ್ದರು. ಶ್ರೀ. ತಿರುಮಲೆ ತಾತಾಚಾರ್ಯಶರ್ಮರ ಪತ್ರಿಕೆಯ ಬರವಣಿಗೆ ಗ್ರಂಥರೂಪವಾಗಿ ಬಂದಿದೆ. ಗಾಂಧಿ ಸಾಹಿತ್ಯಮಾಲೆಯಲ್ಲಿ ಶ್ರೀ. ಕೃಷ್ಣಶರ್ಮರು ಗಾಂಧಿ ವಿಚಾರ ಪ್ರಣಾಲಿಯನ್ನು, ಮಾನ್ಯ ದಿವಾಕರ ಅವರು ರಾಷ್ಟ್ರೀಯ ವಾಙ್ಮಯ ಮಾಲೆಯಲ್ಲಿ ತಾತ್ವಿಕ ವಿವೇಚನೆಯ ಗ್ರಂಥಗಳನ್ನು ಒದಗಿಸಿದ್ದಾರೆ. ಮಿಂಚಿನ ಬಳ್ಳಿಯಲ್ಲಿ ರಾಜಕೀಯ ವಿಷಯವನ್ನು ಕುರಿತು ಕೆಲವು ಹೊತ್ತಿಗೆಗಳು ಬಂದಿವೆ. ( ಹೈದರಾಬಾದಿನ ಶ್ರೀ ಕೃಷ್ಣಾಚಾರ್ಯ ಜೋಶಿಯವರ ಕೃತಿಗಳನ್ನು ನಾನು ಈಚೆಗೆ ಗಮನಿಸಿದ್ದೇನೆ.) ವಿವಿಧ ರಾಜಕೀಯ ಸಮಸ್ಯೆಗಳ ವ್ಯವಸ್ಥಿತ ನಿರೂಪಣೆಯು ಸಂಗ್ರಹವಾಗಿಯಾದರೂ ಪೂರ್ಣವಾಗಿ ಹಾಲಪ್ಪನವರ ಗ್ರಂಥದಲ್ಲಿದ್ದು ಅಭ್ಯಾಸಿಗಳಿಗೂ ಕುತೂಹಲಿಗಳಿಗೂ ರಾಜಕೀಯ ವಿಚಾರವಂತರಿಗೂ ಪ್ರಯೋಜನಕಾರಿಯಾಗಿದೆ. ಭಾರತದ ರಾಜಕಾರಣದ ಐತಿಹಾಸಿಕ ನಿರೂಪಣೆ, ಇಂದಿನ ಸಮಸ್ಯಾತ್ಮಕ ಪರಿಸ್ಥಿತಿ ಇವುಗಳ ಉಚಿತವಾದ ವಿಚಾರಪೂರ್ಣವಾದ ಪರಿಚಯಕ್ಕೆ ಈ ಗ್ರಂಥ

ಉಪಯುಕ್ತವಾಗಿದೆ. ಆಧುನಿಕ ಹಿಂದುಸ್ತಾನದ ಘಟನಾತ್ಮಕ ಸಮಸ್ಯೆಗಳೂ ವಿವಿಧವಾಗಿವೆ. ಸಾಮಂತ ಸ್ವರಾಜ್ಯವೋ ಪೂರ್ಣ ಸ್ವಾತಂತ್ರ್ಯವೋ, ಏಕತಂತ್ರವೋ, ಸಂಯುಕ್ತರಾಜ್ಯಾಂಗ ಪದ್ಧತಿಯೋ, ಪಾಕಿಸ್ತಾನವೋ, ಅಖಂಡ ಹಿಂದುಸ್ತಾನವೋ, ಬಹುಮತ ಮಂತ್ರಿಮಂಡಲವೊ, ಸಮ್ಮಿಶ್ರ ಮಂತ್ರಿಮಂಡಲವೋ, ಸಂಸ್ಥಾನಗಳು ಅಳಿಯ ಬೇಕೋ, ಉಳಿಯ ಬೇಕೋ? ಅಲ್ಪ ಸಂಖ್ಯಾಕರ ಪ್ರಶ್ನೆ, ಭಾಷಾವಾರ ಪ್ರಾಂತ ರಚನೆಯ ಪ್ರಶ್ನೆ, ಸಾಮ್ಯವಾದವೋ ಬಂಡವಲಗಾರಿಕೆಯೋ — ಇತ್ಯಾದಿ ಪ್ರಶ್ನೆಗಳನ್ನು ಹಾಲಪ್ಪನವರು ನೇರವಾಗಿ ಎತ್ತಿ ಎರಡೂ ಬಗೆಯ ಪಾರ್ಶ್ವಗಳಿಂದ ಚರ್ಚಿಸಿ ಸಮಂಜಸ ನಿರ್ಣಯಕ್ಕೆ ಬಂದಿದ್ದಾರೆ. ಅವರ ನಿರ್ಣಯಗಳನ್ನು ಹೀಗೆ ಸಂಗ್ರಹಿಸಬಹುದು: ಭಾರತಕ್ಕೆ ಇಂದು ಬೇಕಾದುದು ಸಂಪೂರ್ಣ ಸ್ವಾತಂತ್ರ್ಯ. ಸ್ವಾಯತ್ತ ಭಾಷಾವಾರ ಪ್ರಾಂತಗಳು ಸಮ್ಮಿಶ್ರ ಮಂತ್ರಿ ಮಂಡಲಗಳು, ಸಂಯುಕ್ತ ರಾಜ್ಯಾಂಗದ ಅಖಂಡ ಭಾರತ, ಸಾಮ್ಯವಾದದ ಧೋರಣೆ. ಸರ್ವರಿಗೂ ಸಮಪಾಲು, ಸುಖದಬಾಳು, ಎಂಬ ಮಂತ್ರೋಚ್ಚಾರಣೆಯೂ ಇಲ್ಲಿದೆ.

ಇಂತಹ ಸಮಂಜಸ ಧೋರಣೆಯ ಗ್ರಂಥವನ್ನು ಕನ್ನಡಿಗರು ಸಂತೋಷದಿಂದ ಸ್ವಾಗತಿಸದೆ ಇರಲಾರರು. ಗ್ರಂಥಕಾರರು ಸಂಸ್ಥಾನಗಳ ಪ್ರಶ್ನೆಯನ್ನು ಬಿಡಿಸಲು ಹೊರಟಿದ್ದಾರೆ. ಕೂಪ್‌ಲಂಡ ಯೋಜನೆ, ಸಪ್ರು ಸಮಿತಿಯ ವರದಿ, ಪಾಕಿಸ್ತಾನದ ಪ್ರಶ್ನೆಯ ಇತಿಹಾಸ, ಚರ್ಚೆ, ಕ್ರಿಪ್ಸ್ ಸಂಧಾನದ ವಿವೇಚನೆ, ೧೯೪೨ರ ಕ್ರಾಂತಿಯ ವಿಹಂಗಮ ನೋಟ, ಹಿನ್ನೆಲೆ, ಮುನ್ನೋಟ ಇವುಗಳನ್ನು ವಿವರಿಸಿದ್ದಾರೆ. ಭಾರತದ ಘಟನೆಯ ವಿವಿಧ ಮೆಟ್ಟಲುಗಳನ್ನು ಆರಂಭದಿಂದ ಇಂದಿನವರೆಗೆ ಚರಿತ್ರಕಾರರಂತೆ, ವಿಮರ್ಶಕರಂತೆ ವಿವೇಚಿಸಿದ್ದಾರೆ. ಇವೆಲ್ಲ ನಿರೂಪಣೆಯಿಂದ ಕೂಡಿದ ಈ ಹೊತ್ತಿಗೆ ಕನ್ನಡ ರಾಜಕೀಯ ವಾಙ್ಮಯದಲ್ಲಿ ಬೆಲೆಯುಳ್ಳದ್ದಾಗಿದೆ.

ಭಾರತವು ಎಚ್ಚತ್ತಿರುವುದನ್ನು, ಶಕ್ತಿಯುತವಾಗಿರುವದನ್ನು ರಾಜಕೀಯ ರಂಗದ ವಿವಿಧ ಘಟನೆಗಳ ಸಮಾಲೋಚನೆಯೊಂದಿಗೆ ಹೇಳಿದ್ದಾರೆ. ವ್ಯಾಪಾರಕ್ಕೆಂದು ಬಂದ ಈಸ್ಟ ಇಂಡಿಯಾ ಕಂಪನಿಯ ಆಗಮನದಿಂದ ಆರಂಭಿಸಿ, ಹಿಂದುಸ್ಥಾನ ಬಿಟ್ಟು ಹೊರಡಲು ಸಿದ್ಧರಿರುವೆವೆಂದು ಹೇಳಲುಬಂದ

ಕ್ಯಾಬಿನೆಟ್ ಶಿಷ್ಟಮಂಡಳದ ಆಗಮನದ ವರೆಗಿನ ಮುಖ್ಯಾಂಶಗಳನ್ನು ಸಂಗ್ರಸಿರುವ ಜಾಣ್ಮೆ, ವಿಷಯ ನಿರೂಪಣೆಯಲ್ಲಿಯ ಪ್ರಗತಿಪರ ದೃಷ್ಟಿ ಇವುಗಳು ಮನನೀಯವಾಗಿವೆ.

ಗ್ರಂಥದ ಭಾಷೆಯು ಸವಿಕಟ್ಟಾಗಿದೆ. ಪಡಿನುಡಿ, ನಾಣ್ನುಡಿ, ಜಾಣ್ನುಡಿ, ಬಳಕೆಯ ಶಕ್ತಿಯುತ ಪದಪ್ರಯೋಗ, ಹೋಲಿಕೆಯ ಮಾತು, ಹೊಸ ವಿಚಾರಸರಣಿಗನುಗುಣವಾದ ಉಚಿತ ದೇಶೀಯ ಪದಪ್ರಯೋಗ, ಸಾಹಿತ್ಯದ ಸವಿನುಡಿ, ವಾದದ ಪರಿಣಾಮಕಾರಕ ರೀತಿ— ಇವುಗಳು ಈ ಗ್ರಂಥದಲ್ಲಿ ವಿಪುಲವಾಗಿ ಬಂದಿವೆ. ಕೆಲವೊಂದು ಉದಾಹರಣೆಗಳಿಂದ ಈ ಗ್ರಂಥದ ವಿಷಯ ನಿರೂಪಣೆ, ಭಾಷಾಸರಣಿಗಳನ್ನು ಅರಿತುಕೊಳ್ಳಬಹುದು.

ಆರಂಭದ ಐತಿಹಾಸಿಕ ವಿವರಣೆಯಲ್ಲಿ ಈ ಮಾತುಗಳು ಬರುತ್ತಿವೆ: —

ಅಂತಃಕಲಹ, ಅರಾಜಕತ್ವ ಬ್ರಿಟಿಶ ಸಾಮ್ರಾಜ್ಯದ ಸಸಿ ಕುದುರಲು ಒಳ್ಳೆಯ ಆವರಣವಾಯಿತು.

ಬಂಗಾಲ ಬ್ರಿಟಿಶರ ಸ್ವಪ್ನ ಸಿಂಹವಾಗಿತ್ತು.

ಮೀರಜಾಫರನ ತುಟಿಗೆ ತುಪ್ಪ ಸವರಿದರು.

ಗತ್ತುಗಾರಿಕೆಗೆ ಗೆಲುವಾಯ್ತು.

ಮುಂದಿನ ಘಟನೆಯ ವಿವರಗಳನ್ನು ಚರ್ಚಿಸುವಲ್ಲಿ ಬಂದ ನುಡಿಗಳು ಹೀಗಿವೆ: —

ಚಕ್ರಗೋಷ್ಠಿ ಕಪಟನಾಟಕ.

ಶಾಸನ ಸಭೆಗಳು ದಾಸ್ಯದ ಶೃಂಖಲೆಗಳು.

೧೯೩೫ರ ಫೆಡರೇಶನ್‌ದ ಜುಟ್ಟು ಪಾರ್ಲಿಮೆಂಟಿನ ಕೈಲಿ.

೧೯೩೭ರ ಸ್ವಾಯತ್ತತೆ ಹಣ್ಣಿನ ರಸ ಹಿಂಡಿಕೊಂಡು ಸಿಪ್ಪೆ ಬಿಟ್ಟಂತಾಗಿದೆ.

೯೩ನೆಯ ಕಲಮು ಚಂದ್ರಾಯುಧದಂತಿದೆ.

೧೨೬ನೆಯ ಕಲಮು ರಕ್ಷಾಕವಚವಾಗಿದೆ.

ಮುಖ್ಯಮಂತ್ರಿಯನ್ನು ಶಾಲಾಬಾಲಕರಂತೆ ಕಿವಿಹಿಂಡಿ ಹೊರಗೆ ಕಳಿಸುವಷ್ಟು ಸುಲಭವಾಗಿ ಉಚ್ಚಾಟನೆ ಮಾಡಲಾಯಿತು.

ನಚ್ಚಿದ ಎಮ್ಮೆ ಕೋಣಗರು ಈದಂತೆ ಪ್ರಾಂತಿಕ ಸ್ವಾಯತ್ತತೆ ಭಾರ

ತೀಯರ ಬಯಕೆಗಳನ್ನು ಭಗ್ನ ಮಾಡಿದೆ.

ಕಳೆದ ಯುದ್ಧವನ್ನು, ಅಂದಿನ ಸ್ಥಿತಿಯನ್ನು ಕುರಿತು ನುಡಿಗಳನ್ನಿಷ್ಟು ನೋಡಬಹುದು :

ಶಾಂತಿಯಿಂದ ಬಾಳುತ್ತಿದ್ದ ಮುಗ್ಧ ಮಾನವಕೋಟಿ ಪೈಶಾಚಿಕ ನರಯಜ್ಞಕ್ಕೆ ಆಹುತಿಯಾಯಿತು.

ಹಿಟ್ಲರ ಪೋಲಂಡನ್ನು ಒಂದೇ ಗುಟ್ಕಿಗೆ ನುಂಗಿದ.

ಯುದ್ಧಕ್ಕೆ ಭಾರತವನ್ನು ಎಳೆಯಲಾಯಿತು.

ಇಲ್ಲಿಂದ ಭಾರತದ ರಾಜನೀತಿ ಕೊಳೆಯಲಾರಂಭಿಸಿತು.

ಮುಂದೆ ಭಾರತದ ರಾಜಕೀಯಕ್ಕೆ ಪಾರ್ಶ್ವವಾಯು ಹಿಡಿಯಿತು.

ಇನ್ನು ಕ್ರಿಪ್ಸ ಕೊಡುಗೆ, ಅದರ ವಿಫಲತೆಯನ್ನು ಕುರಿತಾದ ವಿವೇಚನೆಯಲ್ಲಿ ಈ ಮಾತುಗಳು ಬರುತ್ತಿವೆ :

ಮುಖಕ್ಕೆ ಬಿಳಿಯ ಬಣ್ಣ ಬಳಿದು ಹೊಸ ಪೋಷಾಕ ತೊಡಿಸಿ ಮೇಕಅಪ್ ಮಾಡಿದ ಇಂಗ್ಲೀಷ ವಧುವನ್ನು ಕ್ರಿಪ್ಸ ಭಾರತಕ್ಕೆ ಕರೆತಂದ.

ಗಾಂಧೀಜಿ ಅಂದ್ರು,—ಮೇಲೆ "ನೋಡಲು ಬಹು ಅಂದವಾಗಿದೆ. ಒಳಗೆ ಜೀವವಿಲ್ಲ.

ಸಾವರಕರ ಹೇಳಿದರು:— ಕನ್ನೆಯ ಮೈಮೇಲೆ ಸಂರಕ್ಷಣೆಯ ದಾಗೀನೆ, ಒಡವೆ ಹಾಕಿದರೆ ಮಾತ್ರ ತಾಳಿ ಕಟ್ಟುವೆನು.

ಇನ್ನು, ಜಿನ್ನಾ ಪಾಕಿಸ್ತಾನದ ವರದಕ್ಷಿಣೆಯ ಸ್ಪಷ್ಟ ಆಶ್ವಾಸನ ಸಿಗದಿರುವ ಸುಳಿವೂ ದೋಡಿ ಶರಣ ಹೊಡೆದನು.

ಕ್ರಿಪ್ಸ ಸಿಬ್ಬಣ ಮುರಿದು ಬಿತ್ತು.

ಕ್ರಿಪ್ಸ ಕರಗಸ ಹರಿತವಾಗಿದೆ.

ಅದನ್ನು ಅಪ್ಪುವದೆಂದರೆ ಸೂಜಿಗೆ ಮುತ್ತಿಟ್ಟಂತೆ; ಹಾವಿನ ಹೆಡೆಯನ್ನು ಮುದ್ದಿಸಿದಂತೆ ಎಂದು ಉತ್ತರಿಸಿತು ಅಖಂಡ ಭಾರತ.

ಜನರು ಎನ್ನುವಂತೆ ಕ್ರಿಪ್ಸ ಕೃಷ್ಣನೋ ಕೌಟಿಲ್ಯನೋ, ಮೆಕೆವೆಲ್ಲಿಯೋ, ಮಾಯಾವಿಯೋ ಯಾರ ವೇಷ ಧರಿಸಿಕೊಂಡು ಬಂದರೂ ಕೊನೆಗೆ ಅವನ ಸಂಧಾನವು ಮುರಿದುಬಿತ್ತು.

೧೯೪೨ರ ರಾಜಕೀಯ ವಿಪ್ಲವಕ್ಕೆ ಸಂಬಂಧಿಸಿದ ಬರವಣಿಗೆಯ

ಶೈಲಿಯನ್ನಿಷ್ಟು ನೋಡೋಣ :
ಸ್ವಯಂ ಸ್ಫೂರ್ತ ಸ್ವಾತಂತ್ರ್ಯ ಸಂಗೀತಕ್ಕೆ ನಿಜ ನಾಡಿ ಮಿಡಿದು ತಾಳಿ ಹಾಕುತ್ತ, ಮೈಮರೆತು ಮನದಣಿಯೆ ಕುಣಿದ ಎಚ್ಚೆತ್ತ ಭಾರತದ ಚಿತ್ರ ಕಣ್ಣಿಗೆ ಕಟ್ಟಿದಂತಿದೆ.
ಮುಂಬಯಿ ಬಾಂದಳದಲ್ಲಿ ಸ್ವಾತಂತ್ರ್ಯದ ಗುಡುಗು, ಮಿಂಚು ಸುರು ವಾಗಿ ದೆಹಲಿ ಸಿಂಹಾಸನವನ್ನು ನಡುಗಿಸಿವೆ.
ಸರಕಾರ ದುಡುಕಿ ಮಹಾಕ್ರಾಂತಿಗೆ ವೀಳ್ಯೆ ಕೊಟ್ಟಿತು.
ಎಚ್ಚೆತ್ತ ಭಾರತ ಎದ್ದು ಕುಣಿಯಿತು.
ಕ್ರಾಂತಿ ಕಿಡಿ ಎಲ್ಲೆಡೆಯೂ ಸಿಡಿಯಿತು.
ಬಾಳಬನದಲ್ಲಿ ಬಿರಿದು ತನ್ನ ಪರಿಮಳವನ್ನು ಎಲ್ಲೆಡೆಯೂ ಸೂಸಿ ಪಾಂಥರನ್ನು ತನ್ನ ಕಡೆಗೆ ಸೆಳೆದ ಎಲೆಯ ಮರೆಯ ಚೆಲ್ವ ಪುಷ್ಪ ಹುತಾತ್ಮ ಮೈಲಾರ ಮಹಾದೇವ.
ಸಿಮ್ಲಾ ಪರಿಷತ್ತು ಬ್ಯಾ. ಜಿನ್ನಾರವರನ್ನು ಅಟ್ಟಕ್ಕೇರಿಸಿ ರಾಷ್ಟ್ರದ ಸಮಸ್ಯೆಯನ್ನು ಬಲಿಕೊಟ್ಟ ದುರಂತ ಪ್ರಕರಣ.
ದ್ವಿತೀಯ ವೆವೆಲ್ ಯೋಜನೆ ಕ್ರಿಪ್ಸ್ ಕೊಡುಗೆಗೆ ಕಾಯಕಲ್ಪ ಕೊಡಿಸಿದಂತೆ.
ಇಂದು ಭಾರತದ ರಾಜಕೀಯ ಜಗತ್ತಿನಲ್ಲಿ ಎಚ್ಚೆತ್ತ ಭಾರತದ ಅರುಣೋದಯವಾದಂತಾಗಿದೆ. ಮುಂಬರುವ ಸ್ವಾತಂತ್ರ್ಯ ಸೂರ್ಯನ ದರ್ಶನಕ್ಕಾಗಿ ಎಲ್ಲರೂ ಹಾತೊರೆಯುತ್ತಿದ್ದಾರೆ.

ಭಾರತದ ರಾಜ್ಯಘಟನೆಯ ಕೆಲವೊಂದು ಸಮಸ್ಯೆಗಳನ್ನು ಕುರಿತು ಹೇಳಿರುವ ಕೆಲವು ಮಾತುಗಳಿವು :
ಪಾಕಿಸ್ತಾನದ ಶಕ್ತಿಕೇಂದ್ರ ಗಡಿನಾಡು ಪ್ರಾಂತ ಇಂದು ಅದರ ಮೃತ್ಯು ಕೇಂದ್ರ.
ಪಾಕಿಸ್ತಾನ ಜಿನ್ನಾ ಬಿಟ್ಟ ರಾಜಕೀಯ ಅರಿವೆಯ ಹಾವು....ರಾಜಕೀಯ ಬಿಸಿಲ್ಗುದುರೆ.
ಸಂಸ್ಥಾನಗಳು ಮತ್ತು ಪ್ರಾಂತಗಳು ಒಂದೇ ಹೃದಯದ ಎರಡು ಶ್ವಾಸಕೋಶಗಳಂತೆ.

ಗ್ರಂಥಕರ್ತರು ಶಬ್ದ ಪ್ರಯೋಗದಲ್ಲಿಯೂ ಜಾಣ್ಮೆ ತೋರಿದ್ದಾರೆ ಕೆಲವು ಉದಾಹರಣೆಗಳು ಇಂತಿವೆ :

ಹೂರಣ, ಗಗನಕುಸುಮ, ಮೇಟಸೂತ್ರ, ವೀರಗಾಸೆ, ಗೀಳುಹಿಡಿ, ಬಳಗಹಾಕು, ಬುಡಕ್ಕೆ ಬೀಸಿ ನೀರೆರೆ, ಎಣ್ಣೆ ನೀರಿನ ಬೆರಕೆ, ತೊಟ್ಟಿಲಿನಿಂದ ಚಟ್ಟದವರೆಗೆ, ಮಾಂಗಲ್ಯ ವಿಹೀನ ಮಾನಿನಿಯಂತೆ.

ಇಂಗ್ಲಿಷ ಶಬ್ದಗಳನ್ನು ಕನ್ನಡಕ್ಕೆ ಅಳವಡಿಸಿಕೊಳ್ಳುವಲ್ಲಿಯೂ ಜಾಣ್ಮೆಯಿದೆ.

ಸುತ್ತೋಲೆ (Circular), ಆನುಗೋಲು (lever), ನೆಲಸಿಗ (Resident), ತಿರುವು (Turning point) ಮಾಟಮಣಿಹ (Acts and achievment) ಕೂಳೆಬರೆಹ (Post Seript)

ಒಟ್ಟಿನಲ್ಲಿ, ಈ ಗ್ರಂಥದಲ್ಲಿ ನಿರ್ದುಷ್ಟವಾದ ವಿಷಯವಿದೆ. ಸವಿಕಟ್ಟಾದ ನಿರೂಪಣೆಯಿದೆ. ಸಮಂಜಸ ವಾದವಿದೆ. ಶಕ್ತಿಯುತ ಭಾಷಾಸರಣಿಯಿದೆ.

'ಎಚ್ಚೆತ್ತ ಭಾರತ' ಎತ್ತ ಸಾಗಿದೆ? ಈ ಪ್ರಶ್ನೆಯ ಉತ್ತರವನ್ನು ಹೀಗೆ ಸಂಗ್ರಹಿಸಬಹುದು :

ಜಗತ್ತಿನಲ್ಲಿಂದು ಪ್ರಚಂಡ ಪರಿವರ್ತನಕಾರಿ ಪ್ರಭಾವಗಳ ಪ್ರಗತಿ ಶಕ್ತಿಗಳು ಪ್ರವಹಿಸಿ.... ಮೂಢಾಚಾರಗಳನ್ನು ಕೊಚ್ಚಿ ಬಗಿಯುತ್ತವೆ. ಭಾರತದ ಹಳ್ಳಿಗಳ ಬಾಳಿನಲ್ಲಿ ಸೊಗವಿಲ್ಲ....ಬಡತನವೇ ಅವರ ಆಸ್ತಿ ರೊಟ್ಟಿಯೇ ಬೆಲ್ಲ ಅವರಿಗೆ.

ಭಾರತದ ಬಹುಜನ ಸಂಪತ್ತಿನ ಶಕ್ತಿ ಇಲ್ಲದೆ, ತಿಳಿವಿನ ಬೆಳಕಿಲ್ಲದೆ ಕೊಳೆಯುತ್ತಿದ್ದಾರೆ.

ಸುಖ ಸಮತೆಯ ಸುಂದರ ಸದೃಢ ಸ್ವತಂತ್ರ ಭಾರತದ ನಿರ್ಮಾಣವೇ ಭಾರತದ ಮಾಸಾಳುಗಳ ಮುಂದಿರುವ ಹೆಗ್ಗುರಿ.....ಈ ಗುರಿಯತ್ತ ಸಾಗಿದೆ ಭಾರತ.

ಆ ಗುರಿ ಬೇಗ ಕೈಗೂಡಲೆಂದು ನಾವೆಲ್ಲ ಹಾರೈಸೋಣ. (೧೯೪೬)

# ಅಮೇರಿಕೆಯ ಪುಸ್ತಕಗಳನ್ನು ಕುರಿತು

ಶ್ರೀ ಕೃಷ್ಣಲಾಲ ಶ್ರೀಧರಾಣಿಯವರು ಹನ್ನೆರಡು ವರುಷ ಅಮೇರಿಕೆಯಲ್ಲಿ ವಾಸವಾಗಿದ್ದರು. ಅವರು ಮರಳಿ ಭಾರತಕ್ಕೆ ಬಂದಾಗ ಅಮೇರಿಕೆಯ ಸಾಹಿತ್ಯವನ್ನು ಕುರಿತು ಕೇಳಲಾದ ಬಗೆಬಗೆಯ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಅವರು ಆ ಸಾಹಿತ್ಯದ ವೈಶಿಷ್ಟ್ಯಗಳನ್ನು ಸೂಚಿಸಿದರು. ಅದನ್ನಿಲ್ಲಿ ಸಂಗ್ರಹಿಸಿದೆ:

(೧) ಜಗತ್ತಿನ ನಾನಾ ದೇಶಗಳ ಲೇಖಕರು ಅಮೇರಿಕೆಯಲ್ಲಿದ್ದುಕೊಂಡು ಇಂಗ್ಲಿಷಿನಲ್ಲಿ ಗ್ರಂಥ ರಚಿಸಿದಾಗ ಆ ಎಲ್ಲ ಲೇಖಕರನ್ನು ಅಮೇರಿಕೆಯು ತನ್ನವರೆಂದೇ ತಿಳಿದು ಅವರನ್ನು ಗೌರವಿಸುವುದುಂಟು. ಸಾಹಿತ್ಯದ ಅಭಿರುಚಿಯಲ್ಲಿ ರಾಷ್ಟ್ರೀಯ ಯಾವ ಗಡಿಗಳನ್ನೂ ಅಮೇರಿಕೆಯು ಒಪ್ಪುವದಿಲ್ಲ. ಹಿಂದುಸ್ತಾನದ ಮುಖರ್ಜಿಯೇ ಆಗಲಿ, ಚೀನಾ ದೇಶದ ಲಿನ್ ಯುಟ್ಯಾಂಗರೇ ಆಗಲಿ, ಇಂತಹವರನ್ನು ಅಮೇರಿಕೆಯು ಮನ್ನಿಸಿ ತನ್ನವರನ್ನಾಗಿ ಮಾಡಿಕೊಂಡಿದೆ. ಈ ವಿಶಾಲ ಭಾವನೆಯೇ ದ್ವಾದಶ ಸೂತ್ರಗಳಲ್ಲಿ ಮೊದಲನೆಯದಾಗಿದೆ. ವಿವಿಧ ಜನಾಂಗಗಳ, ದೇಶಗಳ ಪ್ರಜೆಗಳಿಂದ ಕೂಡಿ ವ್ಯಾಪಕವಾದ ರಾಷ್ಟ್ರೀಯತೆಯನ್ನು ಅಮೇರಿಕೆಯು ಅಳವಡಿಸಿಕೊಂಡಿದೆ ವಿವಿಧ ಸಂಸ್ಕೃತಿಗಳ ವಾಹಿನಿಗಳನ್ನು ಅಮೇರಿಕೆಯ ಸಾಹಿತ್ಯ ಒಡಮೂಡಿಸಿದೆ. ರವೀಂದ್ರನಾಥ ಠಾಕೂರರ ಕಾವ್ಯದ ಕಮನೀಯತೆ, ಖಲೀಲ್ ಗಿಬ್ರಾನನ ಅನುಭಾವ ಈ ಒಲವುಗಳನ್ನು ಆ ಸಾಹಿತ್ಯದಲ್ಲಿ ನಾವು ಕಾಣಬಹುದು.

(೨) ಅಮೇರಿಕಾಖಂಡದ ಭೂಭಾಗ ಬಹಳ ವಿಸ್ತಾರವಾದುದು. ಅಲ್ಲಿಯ ಪ್ರಾಕೃತಿಕ ಸೌಂದರ್ಯವು ವೈವಿಧ್ಯದಿಂದ ಕೂಡಿದೆ. ಈ ವಿಶಾಲ ಭೂಭಾಗದ ವೈವಿಧ್ಯಯುಕ್ತವಾದ ಪ್ರಕೃತಿಯ ಸೊಬಗು ಈ ದೇಶದ

ಸಾಹಿತ್ಯದಲ್ಲಿ ಚಿತ್ರಿತವಾಗಿದೆ. ಇದರಿಂದಾಗಿ ನಿರೀಕ್ಷಣ ಶಕ್ತಿಯ ಹಾಗೂ ನಿರೂಪಣ ಶಕ್ತಿಯ ವೈಶಾಲ್ಯ-ವೈವಿಧ್ಯ ಈ ಸಾಹಿತ್ಯದಲ್ಲಿ ಕಂಡುಬರುತ್ತಿದೆ.

(೩) ವಿಸ್ತಾರವಾದ ಭೂಭಾಗದ ಈ ದೇಶದಲ್ಲಿ ಅನೇಕ ಪ್ರಾದೇಶಿಕ ಘಟಕಗಳೂ ಇವೆ. ಆ ಪ್ರದೇಶಗಳ ವೈಶಿಷ್ಟ್ಯಗಳನ್ನು ಒಡಮೂಡಿಸುವ ಪ್ರಾದೇಶಿಕ ಸಾಹಿತ್ಯವು ಇಲ್ಲಿ ಸಾಕಷ್ಟು ಕಂಡುಬರುತ್ತಿದೆ.

(೪) ಅಮೇರಿಕೆಯ ಇತಿಹಾಸ ಇತ್ತೀಚಿನದು. ಈ ಸಣ್ಣ ಕಾಲಾವಧಿಯ ಇತಿಹಾಸವನ್ನು ಕೂಡ ಅಮೇರಿಕಾ ದೇಶದ ಸಾಹಿತ್ಯ ವಿವಿಧವಾಗಿ ತನ್ನ ಐತಿಹಾಸಿಕ ಕಾದಂಬರಿಗಳಲ್ಲಿ ಪಡಿಮೂಡಿಸಿದೆ. ಜಗತ್ತಿನ ಬೇರೆ ಯಾವ ದೇಶಲ್ಲಿಯೂ ಕಂಡುಬರದ ಸಂಖ್ಯೆಯಲ್ಲಿ ಐತಿಹಾಸಿಕ ಕಾದಂಬರಿಗಳು ರಚಿತವಾಗಿವೆ.

(೫) ಹಳ್ಳಿ ಹಾಗೂ ಪಟ್ಟಣ ಇವುಗಳಲ್ಲಿಯ ಅಂತರವನ್ನು ಅಮೇರಿಕೆ ತೀರ ಕಡಮೆ ಮಾಡಿದೆ. ತೀರ ಸಣ್ಣ ಹಳ್ಳಿಗಳಲ್ಲಿ ಕೂಡ ದೊಡ್ಡ ಪಟ್ಟಣದ ಅನುಕೂಲತೆಗಳೆಲ್ಲ ದೊರೆಯುವುದರಿಂದ ಹಳ್ಳಿಗಳನ್ನು ಅಲಕ್ಷಿಸಿ ಪಟ್ಟಣಗಳಲ್ಲಿ ಮಾತ್ರ ವಾಸಿಸುವ ಆವಶ್ಯಕತೆಯು ಉಂಟಾಗುವುದೇ ಇಲ್ಲ. ಹೊಲದಲ್ಲಿ ತನ್ನ ಕೆಲಸ ಮುಗಿದ ಕೂಡಲೆ ಒಕ್ಕಲಿಗನು ಹಾಲಿವುಡ್ಡಿನ ಸಿನೇಮಾ ನಟನಂತೆ ವೇಷ ಮಾಡಿಕೊಂಡು ಮೋಜಿನಿಂದ ಮೆರೆಯಬಲ್ಲ. ಆದಕಾರಣ ಹಳ್ಳಿಗಳ ಬಗೆಗೆ ಹೆಚ್ಚಾದ ಆಸ್ಥೆಯನ್ನು ತೋರಿಸಬೇಕೆಂಬ ಉದ್ದೇಶದಿಂದ ರಚಿತವಾದ ಸಾಹಿತ್ಯ ಅಲ್ಲಿ ಕಂಡುಬರುವುದಿಲ್ಲ.

(೬) ವ್ಯಾಪಾರ ಉದ್ಯೋಗಗಳಿಗಾಗಿ ಸಾಮೂಹಿಕ ಸಂಘಟನೆ ಅಮೇರಿಕಾ ದೇಶದಲ್ಲಿ ವಿಶೇಷವಾಗಿದೆ. ಹೀಗಿದ್ದರೂ ಧನವಂತ ಭಾಂಡವಲುದಾರರಿಗೆ ವಿರೋಧವಾಗಿ ಸಾಮಾನ್ಯ ಮನುಷ್ಯನ ಪಕ್ಷವನ್ನೇ ಎತ್ತಿ ಹಿಡಿಯುವುದಕ್ಕಾಗಿ ಸಾಹಿತ್ಯವನ್ನು ಒಂದು ಸಾಧನವನ್ನಾಗಿ ಅಲ್ಲಿ ಮಾಡಿಕೊಳ್ಳಲಾಗಿದೆ. ಈ ರೀತಿಯ ಬರೆವಣಿಗೆಗೆ ಇತ್ತೀಚಿಗೆ ಪ್ರಗತಿಶೀಲವೆಂಬ ಹೆಸರೂ ಬಂದಿದೆ.

(೭) ಅವಾಸ್ತವವೂ ಭಯಂಕರವೂ ಆಗಿರುವ ಚಿತ್ರಗಳನ್ನು ಕೊಡುವುದು ಇಲ್ಲಿಯ ಸಾಹಿತ್ಯದ ಮತ್ತೊಂದು ವೈಶಿಷ್ಟ್ಯ. ಕಾಲ್ಡವೆಲ್ ಎಂಬವರ 'ಟೊಬೆಕೊ ರೋಡ್' ಎಂಬ ಪುಸ್ತಕವು ಈ ಮಾದರಿಯದಾಗಿದೆ. ಸಾಹಿತ್ಯದಲ್ಲಿ ಭಯಂಕರವಾದುದನ್ನು ಒಪ್ಪುವುದಲ್ಲದೆ, ಮೆಚ್ಚುವುದೂ

ಕೂಡ ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತಿದೆ. ಹಿಂದುಸ್ತಾನದ ಸಾಹಿತ್ಯಕ್ಕೆ ಮಾತ್ರ ಇಂತಹ ದೃಷ್ಟಿ ಅಪರಿಚಿತವೆಂದು ಹೇಳಬೇಕಾಗುತ್ತಿದೆ.

(೮) ಕಾಯಕಕ್ಕೆ ಗೌರವ ಸಲ್ಲಿಸುವುದು ಅಮೇರಿಕಾ ದೇಶದ ವೈಶಿಷ್ಟ್ಯವಾಗಿದೆ. ಈ ಅಂಶವನ್ನು ಸ್ಪಷ್ಟವಾಗಿ ಪಡಿಮೂಡಿಸುವುದು ಇಲ್ಲಿಯ ಸಾಹಿತ್ಯದ ಒಂದು ಮಹತ್ವದ ವೈಶಿಷ್ಟ್ಯವಾಗಿದೆ. ಶ್ರಮಜೀವಿಗೆ ಮಹತ್ವವನ್ನು ಕೊಟ್ಟು ಸಾಮಾನ್ಯಜೀವಿಯನ್ನು ಮನ್ನಿಸುವ ಈ ಗುಣದಿಂದ ಸಾಮಾಜಿಕ ನ್ಯಾಯವನ್ನು ಪಾಲಿಸಿದಂತೆ ಆಗುತ್ತಿದೆ. ಇದನ್ನು ತೀವ್ರವಾಗಿ ವ್ಯಕ್ತಪಡಿಸುವ ಬರೆವಣಿಗೆ ಇಂದಿನ ಅಮೇರಿಕಾ ದೇಶದ ಕಾದಂಬರಿಗಳಲ್ಲಿ ಕಂಡುಬರುತ್ತಿದೆ. ಸಾಮಾನ್ಯ ಮನುಷ್ಯನಿಗೆ ಮನ್ನಣೆ ಕೊಟ್ಟಂತೆ ಅವನು ಮಾತನಾಡುವ ಭಾಷೆಯನ್ನೂ ಒಪ್ಪಿಕೊಂಡು ಅದನ್ನು ಸಾಹಿತ್ಯದಲ್ಲಿ ಬಳಸಲಾಗುತ್ತಿದೆ. 'ಹೆಮಿಂಗ್ವೆ' ಎಂಬ ಲೇಖಕನು ಮಾತಿನ ಭಾಷೆಯನ್ನು ಸಾಹಿತ್ಯದಲ್ಲಿ ಬಳಸುವುದರಲ್ಲಿ ಪ್ರಮುಖನಾಗಿದ್ದಾನೆ.

(೯) ವಾಸ್ತವಾಂಶಗಳನ್ನು ಅಮೇರಿಕೆಯ ಜನರು ಹೆಚ್ಚಾಗಿ ಮೆಚ್ಚಿಕೊಳ್ಳುತ್ತಾರೆ. ವಾಸ್ತವಾಂಶಗಳಲ್ಲಿ ಒಂದು ಬಗೆಯ ಮಾಯಾಜಾಲವಿದ್ದಂತೆ ಅವರಿಗೆ ಅನಿಸುತ್ತಿದೆ. ಯಾವುದೇ ಸಮಸ್ಯೆಯನ್ನು ಬಿಡಿಸಬೇಕಾದರೆ ಅದರ ಬಗೆಗೆ ಇರುವ ವಾಸ್ತವಾಂಶಗಳನ್ನೆಲ್ಲಾ ಅರಿತುಕೊಳ್ಳುವುದರಿಂದಲೇ ಅದು ಸಾಧ್ಯವೆಂದು ಅವರು ನಂಬುತ್ತಾರೆ. ತತ್ವ ಪ್ರತಿಪಾದಿಸುವುದರಲ್ಲಿ ಜರ್ಮನರೂ ಇಂಗ್ಲೀಷರೂ ನಿಪುಣರಾಗಿರುವಂತೆ ವಾಸ್ತವಾಂಶಗಳನ್ನು ಅರಿತುಕೊಳ್ಳುವುದರಲ್ಲಿ ಅಮೇರಿಕಾದವರು ಹೆಚ್ಚು ನಿಪುಣರಾಗಿದ್ದಾರೆ. 'ಅಪ್ಟನ್ ಸಿಂಕ್ಲೆಯರ್'ನ ಕಾದಂಬರಿಗಳಲ್ಲಿ ಈ ಮಾತು ಸ್ಪಷ್ಟವಾಗಿದೆ. ವಾಸ್ತವ ಅಂಶಗಳಿಗೇ ವಿಶೇಷ ಪ್ರಾಧಾನ್ಯ ದೊರೆಯುವುದರಿಂದ ಅಂತಹ ಕಾದಂಬರಿಗಳು ಒಮ್ಮೊಮ್ಮೆ ಸಪ್ಪೆಯಾಗಿಯೂ ತೋರಬಹುದು.

(೧೦) ಮದ್ಯಪಾನದ ವಿಷಯವು ಭಾರತೀಯರಿಗೆ ಒಂದು ವೈಶಿಷ್ಟ್ಯವಾಗಿ ತೋರುವಂತೆ ಯುರೋಪಿಯನ್ ಜನಾಂಗಗಳಿಗೆ ತೋರಲಾರದು. ಅಮೇರಿಕೆಯ ಜೀವನದಲ್ಲಿ ಮದ್ಯಪಾನವು ಒಂದು ಸಭ್ಯತೆಯ ಲಕ್ಷಣವೇ ಆಗಿಬಿಟ್ಟಿದೆ. ಕುಡಿಯುತ್ತ ಕುಡಿಯುತ್ತ ಸತ್ತು ಹೋಗುವವರನ್ನು ಅಮೇರಿಕಾ ದೇಶದವರ ಜೀವನದಲ್ಲಿಯೂ ಕಾಣಬಹುದು; ಸಾಹಿತ್ಯದಲ್ಲಿಯೂ

ಕಾಣುತ್ತೇವೆ. ಕಲಾಕೃತಿಗಳಲ್ಲಿ ಮದ್ಯಪಾನವನ್ನು ಒಂದು ಅನುಕೂಲ ಸಾಧನವನ್ನಾಗಿ ಅಲ್ಲಿಯವರು ಮಾಡಿಕೊಂಡಿದ್ದಾರೆ.

(೧೧) ಮಧ್ಯಮ ವರ್ಗದ ಜನತೆ ಅಮೇರಿಕೆಯ ಜೀವನದ ಬೆನ್ನೆಲುಬು ಇದ್ದಂತೆ. ಅಲ್ಲಿ ಮಧ್ಯಮ ವರ್ಗದವರೇ ಜನಸಾಮಾನ್ಯರಾಗಿದ್ದಾರೆ. ಹಿಂದುಸ್ತಾನದಲ್ಲಿ ಇರುವ ಜನಸಾಮಾನ್ಯವೆಂಬ ವರ್ಗ ಅಮೇರಿಕಾ ದೇಶದಲ್ಲಿ ಇಲ್ಲವೇ ಇಲ್ಲ. ಅಂತೆಯೇ ವರ್ಗದ ತೀವ್ರ ಭೇದ ಅಮೇರಿಕೆಯ ಜೀವನದಲ್ಲಾಗಲಿ, ಸಾಹಿತ್ಯದಲ್ಲಾಗಲೀ ಕಂಡುಬರುವುದಿಲ್ಲ. ಮಧ್ಯಮ ವರ್ಗದ ವ್ಯಕ್ತಿಯು ತಾನು ಮುಂದೆ, ಎಂದಾದರೂ ಕೋಟ್ಯಾಧಿಪತಿ ಆಗಿಯೇ ತೀರುವೆನು, ಎಂದು ತಿಳಿಯುತ್ತಾನೆ. ಯಶಸ್ಸು, ಪ್ರಗತಿ, ಆಶಾವಾದಿತ್ವ— ಈ ವಿಚಾರಗಳು ಅಮೇರಿಕೆಯ ಸಾಹಿತ್ಯದಲ್ಲಿ ಎದ್ದು ಕಾಣುತ್ತಿವೆ.

(೧೨) ಅಮೇರಿಕೆಯಲ್ಲಿ ಸಾಹಿತ್ಯಕ್ಕೆ ಯೋಗ್ಯ ಪ್ರತಿಫಲ ಹಣದ ರೂಪದಲ್ಲಿ ದೊರೆಯುತ್ತಿದೆ. ಇಲ್ಲಿಯ ಕೆಲವು ಕಾದಂಬರಿಕಾರರು ದೊಡ್ಡ ಕಾರಖಾನೆ ಇಟ್ಟವರಷ್ಟು ಇಲ್ಲವೆ ದೊಡ್ಡ ವ್ಯಾಪಾರದಲ್ಲಿ ತೊಡಗಿದವರಷ್ಟು ಶ್ರೀಮಂತರಾಗಿರುತ್ತಾರೆ. ಇಲ್ಲಿ ಪುಸ್ತಕದ ಉದ್ಯೋಗ ಅಪಾರವಾಗಿ ಬೆಳೆದಿದೆ. ಇನ್ನಿತರ ಉದ್ಯೋಗಗಳಂತೆ ಅದೂ ವ್ಯಾಪಕವಾಗಿದೆ; ಲಾಭದಾಯಕವಾಗಿದೆ. ದೊಡ್ಡ ಪ್ರಮಾಣದಲ್ಲಿ ಪುಸ್ತಕರಚನೆ ಮನರಂಜನೆ ಇವುಗಳ ವೃದ್ಧಿಗೆ ಬುಕ್‌ಕ್ಲಬ್ಬು ಕಾರಣವಾಗಿವೆ. ಜಗತ್ತಿನ ಶ್ರೇಷ್ಠ ಲೇಖಕರು ಅಮೇರಿಕೆಯತ್ತ ಧನಸಂಪಾದನೆಗಾಗಿ ಧಾವಿಸುತ್ತಾರೆ. ಹೀಗಾಗಿ ಬರೆವಣಿಗೆಯ ಮಟ್ಟವು ಮೇಲಕ್ಕೇರಿದೆ.

ಅಮೇರಿಕೆಯಲ್ಲಿ ಇಂದಿನದು ಕಾದಂಬರಿಯ ಯುಗವೇ ಆಗಿದೆ. ಗಾತ್ರ ಯೋಗ್ಯತೆಗಳ ದೃಷ್ಟಿಯಿಂದ ಅಮೇರಿಕೆಯ ಕಾದಂಬರಿಗಳ ರಚನೆ ಬೇರೆ ಯಾವ ದೇಶದಲ್ಲಿಯೂ ಇಲ್ಲ. ಕವಿತೆಯ ವಿಷಯಲ್ಲಿ ಅಮೇರಿಕಾ ದೇಶವು ಹಿಂದೆಯೂ ಸಮೃದ್ಧವಾಗಿರಲಿಲ್ಲ. ಈಗಂತೂ ಕವಿತೆ ತೀರ ಕಡಮೆಯಾಗಿದೆ. ಇಂದಿನ ಯಾಂತ್ರಿಕ ಸಂಸ್ಕೃತಿಯು ಕಲ್ಪನೆಯ ಪಕ್ಷಿಯನ್ನು ಗಗನಕ್ಕೆ ಏರಗೊಡುವುದಿಲ್ಲ. ಬಹುಶಃ ಹಿಂದುಸ್ತಾನವೊಂದನ್ನು ಬಿಟ್ಟರೆ ಉಳಿದ ದೇಶಗಳಲ್ಲೆಲ್ಲ ಕವಿತೆ ಅಳಿಯುತ್ತ ನಡೆದಿದೆ. (೧೯೪೮)

---

## ಜಯ-ಪ್ರಕಾಶನ ಧಾರವಾಡ

| | | | | |
|---|---|---|---|---|
| ೧. | ಕನ್ನಡ ತಾಯಿ | .... | .... | ೧-೪-೦ |
| ೨. | ಪುಸ್ತಕ ಪ್ರಪಂಚ | .... | .... | ೧-೦-೦ |

ದೊರೆಯುವ ಸ್ಥಳ:

ಸಾಹಿತ್ಯ ಭಾಂಡಾರ, ಹುಬ್ಬಳ್ಳಿ